KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧, ೨೦೧೧ (ಭಾದ್ರಪದ ೧೦, ಶಕ ವರ್ಷ ೧೯೩೩) | ಸಂಚಿಕೆ ೩೫ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 13 ಎಲ್‌ಜಿಹೆಚ್ 2011, ಬೆಂಗಳೂರು, ದಿನಾಂಕ:19.04.2011**

ಕರ್ನಾಟಕ ಭೂಕಂದಾಯ ಕಾಯ್ದೆ 1964, ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡರಂತೆ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ. | ತಾಲ್ಲೂಕು | ಸದಸ್ಯರು | |
|---|---|---|---|
| 1. | ಹೊಳೆನರಸೀಪುರ | ಶ್ರೀ ಹೆಚ್.ಡಿ. ರೇವಣ್ಣ, ಮಾನ್ಯ ವಿಧಾನ ಸಭಾ ಸದಸ್ಯರು, ಹೊಳೆನರಸೀಪುರ ವಿಧಾನ ಸಭಾ ಕ್ಷೇತ್ರ | ಅಧ್ಯಕ್ಷರು |
| 2. | | ಶ್ರೀ ಕೆ.ಒ. ಕೃಷ್ಣೇಗೌಡ ಬಿನ್ ಪುಟ್ಟೇಗೌಡ, ಕೋಡಿಹಳ್ಳಿ, ದೊಡ್ಡಕುಂಚೇವು, ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ. | ಸದಸ್ಯರು (ಸಾಮಾನ್ಯ) |
| 3. | | ಶ್ರೀ ಗೋವಿಂದರಾಜು ಬಿನ್ ವೀರಭದ್ರಯ್ಯ, ಅಂಬೇಡ್ಕರ್‌ನಗರ, ಹೊಳೆನರಸೀಪುರ, ಹಾಸನ ಜಿಲ್ಲೆ. | ಸದಸ್ಯರು (ಪರಿಶಿಷ್ಟ ಜಾತಿ) |
| 4. | | ಶ್ರೀಮತಿ ರಾಧಾ ಕೋಂ ಗಂಗಾಧರ, ನಂ.29/1, ಕೆ.ಹೆಚ್.ಬಿ. ಕಾಲೋನಿ, ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ. | ಸದಸ್ಯರು (ಮಹಿಳೆ) |
| 5. | | ತಹಶೀಲ್ದಾರರು, ಹೊಳೆನರಸೀಪುರ ತಾಲ್ಲೂಕು, ಹೊಳೆನರಸೀಪುರ | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಈಶ್ವರ್ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂ)

ಪಿ.ಆರ್.384

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 19 ಎಲ್‌ಜಿಹೆಚ್ 2009(ಪಿ), ಬೆಂಗಳೂರು, ದಿನಾಂಕ:19.04.2011**

ಕರ್ನಾಟಕ ಭೂಕಂದಾಯ ಕಾಯ್ದೆ 1964, ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ. | ತಾಲ್ಲೂಕು | ಸದಸ್ಯರು | |
|---|---|---|---|
| 1. | ಬೇಲೂರು | ಶ್ರೀ ರುದ್ರೇಶ್ ಗೌಡ ವೈ.ಎನ್. ಮಾನ್ಯ ವಿಧಾನ ಸಭಾ ಸದಸ್ಯರು, ಬೇಲೂರು ವಿಧಾನ ಸಭಾ ಕ್ಷೇತ್ರ | ಅಧ್ಯಕ್ಷರು |
| 2. | | ಶ್ರೀ ಸಿ.ಟಿ ಮೋಹನ್ ಬಿನ್ ತಿಮ್ಮೇಗೌಡ ಟಿ, ಚೀಲನಾಯಕನಹಳ್ಳಿ, ಬೇಲೂರು ತಾಲ್ಲೂಕು. | ಸದಸ್ಯರು (ಸಾಮಾನ್ಯ) |
| 3. | | ಶ್ರೀಮತಿ ಕೆಂಪಮ್ಮ ಕೋಂ ದ್ಯಾವಯ್ಯ, ಕೇಶವನಗರ, ಅರೇಹಳ್ಳಿ ಅಂಚೆ, ಬೇಲೂರು ತಾಲ್ಲೂಕು | ಸದಸ್ಯರು (ಮಹಿಳೆ) |
| 4. | | ಶ್ರೀ ಮಂಜುನಾಥ್ ಬಿನ್ ಮರಿಗೌಡ, ಕರ್ಕಿಹಳ್ಳಿ, ದಬ್ಬೆ ಅಂಚೆ, ಬೇಲೂರು ತಾಲ್ಲೂಕು. | ಸದಸ್ಯರು (ಪರಿಶಿಷ್ಟ ಜಾತಿ) |
| 5. | | ತಹಶೀಲ್ದಾರರು, ಬೇಲೂರು ತಾಲ್ಲೂಕು, ಬೇಲೂರು. | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಈಶ್ವರ್ ನಾಯಕ್**

ಪಿ.ಆರ್.385

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂ)

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆರ್‌ಡಿ 14 ಎಲ್‌ಜಿಹೆಚ್ 2011, ಬೆಂಗಳೂರು, ದಿನಾಂಕ:19.04.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 55 ಎಲ್‌ಜಿಹೆಚ್ 2009, ದಿನಾಂಕ:20.11.2009ರಲ್ಲಿ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕು, ಬಗರ್‌ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಗೆ ಸದಸ್ಯರನ್ನಾಗಿ ನೇಮಿಸಲಾಗಿದ್ದ ಶ್ರೀ ಆರ್.ಎನ್. ರೇವಣ್ಣ ಬಿನ್ ನಂಜುಂಡೇಗೌಡ, ಅರಕೆರೆ ಗ್ರಾಮ ಜಾವಗಲ್ ಹೋಬಳಿ, ಅರಸೀಕೆರೆ ತಾಲ್ಲೂಕು ಇವರ ಬದಲಾಗಿ ಶ್ರೀ ನಾಗಭೂಷಣ ಸ್ವಾಮಿ ಬಿನ್ ಬಸವರಾಜು, ಕೋಳಗುಂದ, ಜಾವಗಲ್ ಹೋಬಳಿ, ಅರಸೀಕೆರೆ ತಾಲ್ಲೂಕು, ಇವರನ್ನು ಸಮಿತಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

**ಇ. ಈಶ್ವರ್ ನಾಯಕ್**

ಪಿ.ಆರ್.386

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂ)

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 18 ಸಿಎನ್‌ಎಸ್ 2011, ಬೆಂಗಳೂರು, ದಿನಾಂಕ:12.04.2011**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೇಲೂರು ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಬೇಲೂರು, ಹಾಸನ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

1) ಶ್ರೀ ಕೃಷ್ಣೇಗೌಡ, ನವಿಲಹಳ್ಳಿ, ಬೇಲೂರು ತಾಲ್ಲೂಕು.

2) ಶ್ರೀಮತಿ ಗಾಯಿತ್ರಿ ಕೋಂ ಲೇ. ರವಿ, ಕೆರೆಗೋಡು, ಅರೇಹಳ್ಳಿ ಅಂಚೆ, ಬೇಲೂರು ತಾಲ್ಲೂಕು.

3) ಶ್ರೀ ನಾಗೇಶ್ ಬಿನ್ ಪುಟ್ಟಯ್ಯ, ಕಳ್ಳೇರಿ ಗ್ರಾಮ, ಮಂಡಲಮನೆ ಅಂಚೆ, ಬೇಲೂರು ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಸರೋಜಮ್ಮ**

ಪಿ.ಆರ್.391

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

**ಕಂದಾಯ ಸಚಿವಾಲಯ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಆರ್‌ಡಿ 141 ಎಲ್‌ಜಿಕೆ 2010, ಬೆಂಗಳೂರು, ದಿನಾಂಕ:19.04.2011**

ಚಿಕ್ಕಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿ, ಅಮಾನಿಪೂರ್ಣಸಾಗರ ಕೆರೆ ಗ್ರಾಮದ ಸ.ನಂ.141ರಲ್ಲಿ 2.00 ಎಕರೆ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸುವ ಬಗ್ಗೆ ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ 68(5)ರ ಅಡಿಯಲ್ಲಿ ಅಧಿಸೂಚನೆ ಸಂಖ್ಯೆ: ಆರ್‌ಡಿ 141 ಎಲ್‌ಜಿಕೆ 2010, ದಿನಾಂಕ:12.10.2010ರಲ್ಲಿ ಅನುಸೂಚಿಯ 5ನೇ ಸಾಲಿನಲ್ಲಿ 2.00 ಎಕರೆ (ಸ.ನಂ.144) ಎಂಬುದರ ಬದಲಾಗಿ 2.00 ಎಕರೆ (ಸ.ನಂ.141) ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

**ಇ. ಈಶ್ವರ್ ನಾಯಕ್**

ಪಿ.ಆರ್.392

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಂ)

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 19 ಎಲ್‌ಜಿಇ: 2011, ಬೆಂಗಳೂರು, ದಿನಾಂಕ:20.04.2011**

ಕರ್ನಾಟಕ ಭೂಕಂದಾಯ ಕಾಯ್ದೆ 1964, ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್‌ರಚಿಸಿ ಆದೇಶಿಸಿದೆ.

| ಕ್ರ.ಸಂ. | ತಾಲ್ಲೂಕು | ಸದಸ್ಯರು | |
|---|---|---|---|
| 1. | ಹಡಗಲಿ | 1) ಶ್ರೀ ಬಿ. ಚಂದ್ರನಾಯ್ಕ್, ಶಾಸಕರು, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ. | ಅಧ್ಯಕ್ಷರು |
| | | 2) ಶ್ರೀ ಕಂಠಿ ವಿಶ್ವನಾಥ ಬಿನ್ ಶಿವಪ್ಪ, ನಂದಿಹಳ್ಳಿ ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ | ಸದಸ್ಯರು (ಸಾಮಾನ್ಯ) |
| | | 3) ಶ್ರೀ ಲಾಲ್‌ಸಿಂಗ್ ನಾಯಕ್ ಬಿನ್ ಸಾಣ್ಯನಾಯ್ಕ್ ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ. | ಸದಸ್ಯರು (ಪರಿಶಿಷ್ಟ ಜಾತಿ) |
| | | 4) ಶ್ರೀಮತಿ ವೀರಮ್ಮ ಕೋಂ ಟಿ.ಕೆ. ಬ್ಯಾಡಗಿ, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ. | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರರು, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜಿ. ಲಕ್ಷ್ಮೀನಾರಾಯಣ**

ಪಿ.ಆರ್.393

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 113 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ:27.04.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 113 ಸಿಎನ್‌ಎಸ್ 2009, ದಿನಾಂಕ:25.03.2010ರಲ್ಲಿ ಕೋಲಾರ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಕೋಲಾರ, ಕೋಲಾರ ಜಿಲ್ಲೆ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ: 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಕೋಲಾರ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಕೋಲಾರ, ಕೋಲಾರ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

1) ಶ್ರೀ ಈರಪ್ಪ ಬಿನ್ ಮುದ್ದಣ್ಣ, ಹುಲ್ಲಂಕಲ್ ಕೋಲಾರ

2) ಶ್ರೀ ವೆಂಕಟೇಶಪ್ಪ ಬಿನ್ ಮುನಿವೆಂಕಟಪ್ಪ, ಅರಹಳ್ಳಿ, ಕೋಲಾರ

3) ಶ್ರೀಮತಿ ವನಜಮ್ಮ ಕೋಂ ಲೇ: ಚನ್ನೇಗೌಡ, ಚೌಡದೇನಹಳ್ಳಿ, ಕೋಲಾರ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಸರೋಜಮ್ಮ**

ಪಿ.ಆರ್.395

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**WATER RESOURCES SECRETARIAT**

**NOTIFICATION**

**No. WRD 196 Vibyae 2008, Bangalore, Dated:05.05.2011**

In exercise of the provisions contained under Rule 29(b) of the Karnataka Transparency in Public Procurements Rules, 2000, the Secretary to Government, Water Resources Department, Government of Karnataka Vikasa Soudha, Bangalore-560 001 has been appointed as Appellate Authority in respect of the orders passed by the Tender Accepting Authorities viz., Krishna Bhagya Jala Nigam Limited, Karnataka Neeravari Nigam Limited & Cauvery Neeravari Nigam Limited and also against orders passed by the Chief Engineers of Non-nigams i.e., Chief Engineer, Water Resources Development Organisation, Bangalore; Chief Engineer, Hydrology and central Mechanical Organisation, Bangalore; Chief Engineer, Irrigation Central Zone, Munirabad; Chief Engineer, Irrigation Project Zone, Gulbarga and Chief Engineer, Upper Tunga Project.

The said Appellate Authority will hear and dispose of all appeal cases as and when received by the Appellants in respect of the orders passed by the above said tender accepting authorities.

By Order and in the name of the Governor of Karnataka,

**H.K. SAMPATHKUMAR**

Special Officer (Technical-4),

Water Resources Department.

PR-399

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 274 ಮನೋಮು 2010, ಬೆಂಗಳೂರು, ದಿನಾಂಕ:07.05.2011**

Gail (India) Limited ಇವರ Incentives under the Karnataka Infrastructure Policy 2007 ಕ್ಕೆ ಸಂಬಂಧಿಸಿದಂತೆ ಮುದ್ರಾಂಕ ಶುಲ್ಕದಲ್ಲಿ ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಕಲಂ 9(i) ರನ್ವಯ ಶೇ.50 ರಷ್ಟು ಮುದ್ರಾಂಕ ಶುಲ್ಕದಿಂದ ರಿಯಾಯಿತಿಯನ್ನು ಹಾಗೂ ನೋಂದಣಿ ಕಾಯ್ದೆ 1908ರ ಕಲಂ 78ರ ಮೇರೆಗೆ ನೋಂದಣಿ ಶುಲ್ಕದಲ್ಲಿ ಪೂರ್ಣ ವಿನಾಯಿತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ: ಆಇ 136 ವೆಚ್ಚ–7/2011 ದಿನಾಂಕ:25.04.2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.474

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಸಂವಾಪ್ರ 38 ಕೆಎಂಯು 2010, ಬೆಂಗಳೂರು, ದಿನಾಂಕ:21.05.2011**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕು ನಗರ ಹೋಬಳಿಯಲ್ಲಿ ಬಿದನೂರು ಶಿವಪ್ಪ ನಾಯಕರ ಮತ್ತು ವಂಶಸ್ಥರ ಸಮಾಧಿಗಳನ್ನು "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕ ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ, 1961ರ ಕಲಂ 4(1) ರಡಿ" (ಕರ್ನಾಟಕ ಆ್ಯಕ್ಟ್ 1962) ರಾಜ್ಯ ಸಂರಕ್ಷಿತ ಪಾರಂಪರಿಕ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟು, ಅದರಂತೆ 2011ರ ಫೇಬ್ರವರಿ 10ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ "ಭಾಗ–3"ರಲ್ಲಿ ದಿನಾಂಕ:17.08.2010ರ ಅಧಿಸೂಚನೆ ಸಂಖ್ಯೆ: ಕಸಂವಾಪ್ರ 38 ಕೆಎಂಯು 2010ನ್ನು ಪ್ರಕಟಿಸಿ, ಅದರಿಂದ ಭಾದಿತರಾಗುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಿ ಪ್ರಕಟಿಸಲಾಗಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲದಿರುವುದರಿಂದ ಈಗ "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮ 1961ರ ಕಲಂ 4(3)" ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪರಿವಿಡಿಯಲ್ಲಿ ವಿವರಿಸಿರುವ ಶಿವಮೊಗ್ಗ ಜಿಲ್ಲೆ ಹೊಸನಗರ ತಾಲ್ಲೂಕು ನಗರ ಹೋಬಳಿಯಲ್ಲಿ ಬಿದನೂರು ಶಿವಪ್ಪ ನಾಯಕರ ಮತ್ತು ವಂಶಸ್ಥರ ಸಮಾಧಿಗಳನ್ನು "ರಾಜ್ಯ ಸಂರಕ್ಷಿತ ಪಾರಂಪರಿಕ ಸ್ಮಾರಕ" ವೆಂದು ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು

ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ) (ಪ್ರ)

ಪರಿವಿಡಿ

**(ಸಂಖ್ಯೆ: ಕಸಂವಾಪ್ರ 38 ಕೆಎಂಯು 2010 ದಿನಾಂಕ:21.05.2011)**

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ (ಅಡಿಗಳಲ್ಲಿ) | ಮೇರೆಗಳು | ಒಡೆತನ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| ಶಿವಮೊಗ್ಗ | ಹೊಸನಗರ | ಬೈಸ್ ಗ್ರಾಮ (ಸರ್ವೆ ನಂ.2) | ಕೆಳದಿ ಶಿವಪ್ಪ ನಾಯಕ ಮತ್ತು ಅವರ ವಂಶಸ್ಥರ ಸಮಾಧಿಗಳು | ಒಟ್ಟು ಒಂಭತ್ತು (9) (ಸಮಾಧಿಗಳು ಒಂದರ ಪಕ್ಕದಲ್ಲೊಂದು ಅಂದಾಜು 5 ರಿಂದ 10 ಅಡಿ ದೂರದಲ್ಲಿರುತ್ತವೆ | ಅಂದಾಜು 3.00 ಎಕರೆ | – | ಸರ್ಕಾರಿ ಜಾಗ | ಕ್ರಿ.ಸ. 17 ಮತ್ತು 18ನೇ ಶತಮಾನದಲ್ಲಿ ಕೆಳದಿಯ ಮೂರನೇಯ ರಾಜಧಾನಿ ಬಿದನೂರಿನಲ್ಲಿ ಆಳಿದ ಅರಸರು ಮತ್ತು ಅವರ ರಾಣಿಯ ಸಮಾಧಿಗಳು (ಸ್ಥಳ ಹಳೆಯ ಮಠಕೊಪ್ಪ ಮಠ) |

**ಹೆಚ್.ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.476 ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು

ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ) (ಪ್ರ)

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 442 ಪಿಎಂಎಸ್ 2009, ಬೆಂಗಳೂರು, ದಿನಾಂಕ:24.05.2011**

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 7ರ (ಕೇಂದ್ರ ಕಾಯ್ದೆ ವಿ–1872) ಅನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್.ಎಸ್. ವಿಜಯ್, ನ್ಯಾಯವಾದಿಗಳು, "ಟ್ರಿನಿಟಿ", 9ನೇ ಕ್ರಾಸ್, ಬೃಂದಾವನ ಲೇಔಟ್, ಹೊರಮಾವು, ಬೆಂಗಳೂರು–560043 ಇವರನ್ನು ಮೇಲಿನ ಕಾಯ್ದೆಯಡಿ ಕಾರ್ಯನಿರ್ವಹಿಸಲು ಕ್ರಿಶ್ಚಿಯನ್ ಜನಾಂಗದ ವಿವಾಹ ನೊಂದಣಾಧಿಕಾರಿಯನ್ನಾಗಿ ಬೆಂಗಳೂರು ಜಿಲ್ಲೆಯ ಆಡಳಿತ ವ್ಯಾಪ್ತಿಗೆ ಮಾತ್ರ ಸೀಮಿತಗೊಳಿಸಿ, ಸದರಿ ಕಾಯ್ದೆಯಡಿಯಲ್ಲಿ ಸೂಚಿಸಿರುವ ಷರತ್ತುಗಳನ್ನು ಪೂರೈಸುವ ಷರತ್ತಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆಲಿಸ್ ಗೊನ್ಸಾಲ್ವಿಸ್**

ಪಿ.ಆರ್.477 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ರಹದಾರಿ ಮತ್ತು ವಿದೇಶಿಯರು)

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 45 ಎಲ್‌ಜಿಎ 2011, ಬೆಂಗಳೂರು, ದಿನಾಂಕ:25.05.2011**

ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಸಬ್ ಸೆಕ್ಷನ್ (1) 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ದಕ್ಷಿಣ ಕನ್ನಡ ಜಿಲ್ಲೆ ಮೂಡಬಿದ್ರೆ ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ. | ತಾಲ್ಲೂಕು | ಸದಸ್ಯರು | |
|---|---|---|---|
| 1. | ಮೂಡಬಿದ್ರೆ ತಾಲ್ಲೂಕು | ಶ್ರೀ ಕೆ. ಅಭಯಚಂದ್ರ,<br>ಶಾಸಕರು, ಮೂಡಬಿದ್ರೆ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2. | | ಶ್ರೀ ಭಾಸ್ಕರ ಆಚಾರ್ಯ ಬಿನ್ ಗೋಪಾಲ್ ಆಚಾರ್ಯ,<br>ಅಂತಬೆಟ್ಟು ಮನೆ, ಬೆಳುವಾಯಿ ಅಂಚೆ ಮತ್ತು ಗ್ರಾಮ, ಮಂಗಳೂರು ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆ. | ಸದಸ್ಯರು (ಸಾಮಾನ್ಯ) |
| 3. | | ಶ್ರೀ ರಾಘವ ಜಿ. ಮಾತೃ ಪ್ರಸಾದ್, ಸ್ವಾಮಿಲಪದವು ಬಜ್ಪೆ, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | ಸದಸ್ಯರು (ಎಸ್.ಟಿ.) |

| ಕ್ರ.ಸಂ. | ತಾಲ್ಲೂಕು | ಸದಸ್ಯರು | |
|---|---|---|---|
| 4. | | ಶ್ರೀಮತಿ ರೂಪಾ ಎಸ್. ಶೆಟ್ಟಿ ಕೋಂ ಸುಕೇಶ್ ಶೆಟ್ಟಿ, ಎಡಮೇರು ಮನೆ, ಮೂಡುಕೊಜಾಜೆ ಗ್ರಾಮ, ಪಡುಕೊಣಾಜೆ ಅಂಚೆ, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | ಸದಸ್ಯರು (ಮಹಿಳೆ) |
| 5. | | ಸ್ಪೆಷಲ್ ತಹಶೀಲ್ದಾರರು, ಮೂಡಬಿದ್ರೆ ದಕ್ಷಿಣ ಕನ್ನಡ ಜಿಲ್ಲೆ. | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಕೃಷ್ಣಪ್ಪ**

ಪಿ.ಆರ್.483

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಐಟಿಡಿ 62 ಎಡಿಎಂ 2011, ಬೆಂಗಳೂರು, ದಿನಾಂಕ:26.05.2011**

ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತದ ಸಂಘ ನಿಯಮಾವಳಿ (Article of Association) ಗಳ ನಿಯಮ 18ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ನಿವೃತ್ತಿ ಹೊಂದಿದ್ದ ಶ್ರೀಮತಿ ಆರ್. ರಾಜಲಕ್ಷ್ಮಿ, ನಿರ್ದೇಶಕರು, ಎಸ್‌ಟಿಪಿಐ, ಇವರ ಸ್ಥಾನದಲ್ಲಿ ಶ್ರೀ ಜೆ. ಪಾರ್ಥಸಾರಥಿ, ನಿರ್ದೇಶಕರು, ಸಾಫ್ಟ್‌ವೇರ್ ಟೆಕ್ನಾಲಜಿ ಪಾರ್ಕ್ಸ್ ಆಫ್ ಇಂಡಿಯಾ (ಎಸ್‌ಟಿಪಿಐ), ಬೆಂಗಳೂರು ಇವರನ್ನು ಕಿಯೋನಿಕ್ಸ್ ಸಂಸ್ಥೆಯ ನಿರ್ದೇಶಕ ಮಂಡಳಿಯ ನಿರ್ದೇಶಕರನ್ನಾಗಿ ನಾಮನಿರ್ದೇಶನ ಮಾಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಲಿತಾ ಹಾ. ಹಂದಿಗೋಳ**

ಪಿ.ಆರ್.484

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 55 SLU 2011, Bangalore, Dated:09.05.2011**

In exercise of the powers conferred by sub-section (1) of Section 3 of the Prevention of Corruption Act, 1988 (Central Act 49 of 1988) and in partial modification of Notification issued in this behalf, the Government of Karnataka, hereby appoints the II Additional District and Sessions Judge, Tumkur to be the Special Judge for the purpose of the said section for the area of Tumkur District.

By Order and in the name of the Governor of Karnataka,

**P. MARKANDEYA**

PR-488

Under Secretary to Government,

Department of Personnel and Administrative Reforms,

(Service Rules-2)

## LABOUR SECRETARIAT

**NOTIFICATION No. LD 91 LSI 2011, Bangalore, Dated:30.05.2011**

In exercise of the power confirmed by section 87 read with 91A of the ESI Act (Central Act-34 of 1948 vide ESI (Amendment) Act, 2010) the Government of Karnataka hereby exempts to M/s. Karnataka State Industrial and Infrastructure Development Corporation Ltd., Bangalore from 01.01.2011 to 31.12.2011.

By Order and in the name of the Governor of Karnataka,

**GOVINDASWAMY**

PR-490

Desk Officer,

Labour Department (ESIS (M) Services)

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 91 ಎಲ್ಎಸ್ಐ 2011, ಬೆಂಗಳೂರು, ದಿನಾಂಕ:30.05.2011**

ಕಾರ್ಮಿಕ ರಾಜ್ಯ ವಿಮಾ ಕಾಯ್ದೆಯ (ಕೇಂದ್ರ ಕಾಯ್ದೆ 1948ರ 34/ ಕಾರಾವಿ (ತಿದ್ದುಪಡಿ) ಕಾಯ್ದೆ 2010) ಸೆಕ್ಷನ್ 87ರ ಜೊತೆ ಓದಲಾದ 91ಎ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೆ: ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಸಂಸ್ಥೆಗೆ ದಿನಾಂಕ:01.01.2011 ರಿಂದ 31.12.2011ರವರೆಗೆ ಕಾರಾವಿ ಕಾಯ್ದೆ ವ್ಯಾಪ್ತಿಯಿಂದ ಕರ್ನಾಟಕ ಸರ್ಕಾರವು ವಿನಾಯ್ತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ**

ಪಿ.ಆರ್.493

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 45 ಎಲ್ಡಬ್ಲ್ಯೂಎ 2011, ಬೆಂಗಳೂರು, ದಿನಾಂಕ:01.06.2011**

ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ:14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ "ಇಂಡಸ್ಟ್ರಿ ಜನರೇಟಿಂಗ್ ಪವರ್" ಉದ್ಯಮವನ್ನು ಅಧಿಸೂಚನೆ ಸಂಖ್ಯೆ: ಕಾಇ 133 ಎಲ್ಡಬ್ಲ್ಯೂಎ 2010, ದಿನಾಂಕ:03.01.2011ರಲ್ಲಿ ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಅವಧಿಯನ್ನು ಮುಂದಿನ 6 ತಿಂಗಳ ಅವಧಿಗೆ ಮುಂದುವರಿಸಲು ಸರ್ಕಾರವು ಪರಿಗಣಿಸಿದೆ. ಆದುದರಿಂದ, ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ "ಇಂಡಸ್ಟ್ರಿ ಜನರೇಟಿಂಗ್ ಪವರ್" ಉದ್ಯಮವನ್ನು ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ:03.07.2011 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ವಿಸ್ತರಿಸಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**

ಪಿ.ಆರ್.494

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

**ಕಂದಾಯ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಆರ್‌ಡಿ 112 ಎಲ್ಆರ್ಎ 2011, ಬೆಂಗಳೂರು, ದಿನಾಂಕ:27.05.2011**

**ವಿಷಯ:** ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕು, ಭೂ ನ್ಯಾಯ ಮಂಡಳಿ ಸದಸ್ಯರ ಹೆಸರನ್ನು ತಿದ್ದುಪಡಿ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂ:ಕಂಇ 48 ಎಲ್ಆರ್ಎ 2008 ದಿನಾಂಕ:01.10.2008.

ಸರ್ಕಾರದ ಅಧಿಸೂಚನೆ ಸಂ:ಕಂಇ 48 ಎಲ್ಆರ್ಎ 2008 ದಿನಾಂಕ:01.10.2008 ರಲ್ಲಿ ಹೊರಡಿಸಿದ್ದ ಆದೇಶದಲ್ಲಿ ಕ್ರಮ ಸಂಖ್ಯೆ:08ರಲ್ಲಿ ನಾಮನಿರ್ದೇಶನ ಮಾಡಿರುವ "ಶ್ರೀ ಸೂರ್ಯಕಾಂತ ಹುಸಗೆ" ಇವರ ಹೆಸರಿಗೆ ಬದಲಾಗಿ "ಶ್ರೀ ಶಿವರಾಜ ಬಿನ್ ಮುರಗೆಪ್ಪ ಬಿರಾದಾರ" ನ್ಯಾಯವಾದಿಗಳು ಗಿಲ್ಕಿ, ಬಸವಕಲ್ಯಾಣ ತಾಲ್ಲೂಕು, ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣಗೌಡ**

ಪಿ.ಆರ್.522

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

**FINANCE SECRETARIAT**

**NOTIFICATION**

**No.FD 430 Exp-12/2011, Bangalore, Dated:23.05.2011**

1. As per the announcement made in the Budget Speech 2011-12, the Department of Rural Development and Panchayat Raj has issued a Government order No. ಗ್ರಾಅಪ 46 ಆರ್ಆರ್ಸಿ 2011, ದಿನಾಂಕ:11.03.2011 with Cabinet's approval for rejuvenation of tanks in the state. In view of time constraint, it has been decided by the Cabinet that 4(g) exemption may be given for preparation of estimates and DPRs. Finalisation of agencies has to be done by the Empowered Committee headed by the Chief Secretary. Proposals from the District level committees have been obtained and on the basis of their recommendation the Empowered Committee has resolved to give exemption under 4(g) of the KTPP Act, to the Department of RD & PR in respect of the following agencies.

| Sl. No. | Name of the District | Agencies |
|---|---|---|
| 1. | Tumkur | Spectra Associates, Tumkur |
| | | Global surveyors, Tumkur |
| | | M/s Design consortium, Bangalore |
| | | Shreyanka Technologist, Tumkur |
| | | M/s. Nandi Engineering Consultant, Bangalore |
| | | Koushik consultancy, Mysore. |
| | | M/s Manjunath surveyors, Sira |
| | | Kiran Associates, Mysore and Yogeesh, Tumkur |
| | | A-1 survey, Tumkur |
| | | M/s Yashaswi Engineering Consultant, Bangalore |
| 2. | Kodagu | TNI Technologies, Bogadi 2nd Stage, Mysore. |
| | | Goodwill consultancy (Engineer Aradhya) No.421, Naganna stores, Chamaraja double road, Mysore. |
| | | K.P. Raju, N. Block, No.89, Nidhi Nilaya, Kuvempu Nagar, Mysore. |
| | | J. Lingaraju, No.324, D. Subbaiah road, D. Chamaraja mohalla, Mysore. |
| 3. | Haveri | Jalavahini Management Services Pvt, Ltd., Bangalore |
| | | Nikethana Engineering Project Ltd., Bangalore. |

3. Fee for individual estimate/ DPR will be decided by the District Committee, based on the technical features of the work, subject to an upper limit of 0.7% of the value of estimate.

4. This is further subject to the condition that the estimate and DPR so prepared will be technically scrutinized and sanctioned by the competent authority after giving administrative approval. The Final Instalment of the fee should be paid only after technical sanction.

5. The District Committee must ensure that the estimates/ DPRs are of good quality and reasonable fee is paid for that.

By Order and in the name of the Governor of Karnataka,

**J.D. MADHUCHANDRA TEJASWI**

PR-536

Under Secretary (I/c),

Finance Department (Procurement Cell)

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 347 ಮನೋಮು 2008, ಬೆಂಗಳೂರು, ದಿನಾಂಕ:21.05.2011**

ತುಂಗಾ ಮೇಲ್ದಂಡೆ ಯೋಜನೆಗೆ ಬಿಡುಗಡೆಗೊಳಿಸಲಾಗಿರುವ 440.5 ಹೆಕ್ಟೇರ್ ಜಮೀನು ಮತ್ತು ಉಬ್ರಾಣಿ ಅಮೃತಾಪುರ ಏತ ನೀರಾವರಿ ಯೋಜನೆಗೆ ಬಿಡುಗಡೆಗೊಳಿಸಿರುವ 22.46 ಹೆಕ್ಟೇರ್ ಅರಣ್ಯ ಜಮೀನು ಕರಾರು ನೋಂದಣಿಗೆ ತಗಲುವ ಮುದ್ರಾಂಕ ಶುಲ್ಕದಲ್ಲಿ, ಕರ್ನಾಟಕ ನೀರಾವರಿ ನಿಗಮವು ಕರ್ನಾಟಕ ಸರ್ಕಾರದ ಒಂದು ಉದ್ಯಮವಾಗಿರುವುದರಿಂದ ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಕಲಂ 9(1)ರನ್ವಯ ಶೇ.50 ರಷ್ಟು ರಿಯಾಯಿತಿಯನ್ನು ಹಾಗೂ ನೋಂದಣಿ ಕಾಯ್ದೆ 1908ರ ಕಲಂ 78ರ ಮೇರೆಗೆ ನೋಂದಣಿ ಶುಲ್ಕದಲ್ಲಿ ಪೂರ್ಣ ವಿನಾಯಿತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆಇ 307 ವೆಚ್ಚ–7/2011 ದಿನಾಂಕ:26.04.2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಪಿ.ಆರ್.542

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 10 ಸಾಂಹಅ 2011, ಬೆಂಗಳೂರು, ದಿನಾಂಕ:24.05.2011**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಫ್‌ಡಿ 10 ಸಾಂಹಅ 2011 ದಿನಾಂಕ:19.03.2011ರಲ್ಲಿ ಕಾವೇರಿ ಕಲ್ಪತರು ಗ್ರಾಮೀಣ ಬ್ಯಾಂಕಿನ ನಿರ್ದೇಶಕ ಮಂಡಳಿಗೆ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾಪಂಚಾಯತ್, ಮೈಸೂರು ಜಿಲ್ಲೆ ಇವರನ್ನು ದಿನಾಂಕ:19.09.2010 ರಿಂದ 2 ವರ್ಷಗಳ ಅವಧಿಗೆ ರಾಜ್ಯದ ನಾಮನಿರ್ದೇಶಿತ ನಿರ್ದೇಶಕರನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು.

ಪ್ರಾದೇಶಿಕ ಗ್ರಾಮೀಣ ಬ್ಯಾಂಕ್‌ಗಳ ಅಧಿನಿಯಮ 1976ರ ಸೆಕ್ಷನ್ 9(1)(ಇ) ಮತ್ತು ಸೆಕ್ಷನ್ 10ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾಪಂಚಾಯತ್, ಮೈಸೂರು ಇವರ ಬದಲಿಗೆ ಕರ್ನಾಟಕ ಸರ್ಕಾರವು ಯೋಜನಾ ನಿರ್ದೇಶಕರು (ಡಿಆರ್‌ಡಿಎ), ಜಿಲ್ಲಾಪಂಚಾಯತ್, ಮೈಸೂರು ಜಿಲ್ಲೆ, ಮೈಸೂರು ಇವರನ್ನು ಈ ಅಧಿಸೂಚನೆಯ ದಿನಾಂಕದಿಂದ ಮೈಸೂರಿನ ಕಾವೇರಿ ಕಲ್ಪತರು ಗ್ರಾಮೀಣ ಬ್ಯಾಂಕಿನ ಮಂಡಳಿಯ ನಿರ್ದೇಶಕರನ್ನಾಗಿ ದಿನಾಂಕ:18.03.2013ರವರೆಗೆ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭವಾನಿ ದೇವಿ**

ಪಿ.ಆರ್.579 ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಾಂಸ್ಥಿಕ ಹಣಕಾಸು)

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಅಪಜೀ 104 ಎಫ್‌ಎಎಫ್ 2010, ಬೆಂಗಳೂರು, ದಿನಾಂಕ:03.06.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಎಹೆಚ್‌ಎಫ್‌ಎಫ್ 40 ಎಫ್‌ಎಎಫ್ 1993, ದಿನಾಂಕ:02.11.1993ರ ಅನುಸೂಚಿಯ ಕ್ರಮ ಸಂಖ್ಯೆ:4ರ ಗ್ರಾಮದ ಹೆಸರಿನ ಎದುರಿಗೆ "ಕೋಗಿಲೆ" ಎಂದಿರುವುದನ್ನು "ಕೋಗಿಲೆ ಬಾರಮಲೆ ಎಸ್ಟೇಟ್" ಎಂದೂ ಕ್ರಮ ಸಂಖ್ಯೆ:7ರ 'ಬ್ಲಾಕಿನ ಹೆಸರು" ಎದುರಿಗೆ "ಕೋಗಿಲೆ ಬ್ಲಾಕ್" ಎಂದಿರುವುದನ್ನು "ಕೋಗಿಲೆ ಬಾರಮಲೆ ಎಸ್ಟೇಟ್ ಬ್ಲಾಕ್" ಎಂದೂ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್.580 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಕಾರ್ಮಿಕ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಕಾಇ 37 ಎಲ್‌ಎಂಡಬ್ಲ್ಯೂ 2011, ಬೆಂಗಳೂರು, ದಿನಾಂಕ:03.06.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 90 ಎಲ್‌ಎಂಡಬ್ಲ್ಯೂ 2008, ದಿನಾಂಕ:06.01.2011ರ ಸೂಚನೆ ಭಾಗಕ್ಕೆ "ಮುಂದುವರೆದು ಆಹಾರ ಸರಬರಾಜು ಬಾಬ್ತು ವೇತನದಲ್ಲಿ ದಿನಾಂಕ:01.04.2011 ರಿಂದ ಜಾರಿಗೆ ಬರುವಂತೆ ಕಡಿತಗೊಳಿಸಬಹುದು" ಈ ವಾಕ್ಯವನ್ನು ಸೇರಿಸಿ ಓದಿಕೊಳ್ಳತಕ್ಕದ್ದು ಹಾಗೂ ಅಧಿಸೂಚನೆಯಲ್ಲಿನ "ಜೀವನ ನಿರ್ವಹಣಾ ಭತ್ಯೆ" ಎಂಬ ಪದದ ಬದಲಾಗಿ "ತುಟ್ಟಿಭತ್ಯೆ" ಎಂಬ ಪದವನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**

ಪಿ.ಆರ್.581 ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

**HEALTH AND FAMILY WELFARE SECRETARIAT**

**NOTIFICATION**

**No.HFW 101 RGU 2011, Bangalore, dated 04.07.2011**

**Sub:** Publication of seat matrix of Post Graduate Super Speciality Courses 2011-12.

1. Admission to Post Graduate Super Speciality Courses has been regulated by the Karnataka Medical Colleges (Conduct of Entrance test and Selection of PGSSCs) Rules, 1981 and the Rajiv Gandhi University of Health Sciences Ordinance Governing Conduct of Entrance Test for Admission to PGSSCs-2002.

2. Under clause 2(2)(g) d of the Ordinance the Entrance Test Committee under the Chairmanship of the Vice-Chancellor, Rajiv Gandhi University of Health Sciences shall have power to prepare and approve the merit list of Post Graduate Super Speciality Course Entrance Test for Admission to Medical Colleges and the subsequent spot selection process up to the issue of seat

allotment order. However, the allotment shall be on the basis of the seat matrix published by the Government based on the merit list of the PGSSCET-2011 by reserving 50% of the seats to in-service candidates of the total seats shall be reserved for in-service candidates and merit alone shall be the criteria for selection.

3. It is necessary to publish the seat matrix in pursuit of allotment of candidates through counseling on the basis of merit secured in the PGSSCET to be conducted for the seat in Government Autonomous Medical Institution offering Post Graduate Super Speciality Course during the current academic year 2011-12. Out of the total seats, 50% of the seats shall be reserved for in-service candidates and merit alone shall be the criteria for selection.

4. Reservation of 50% of the seats to in-service candiates does not confer any right to in-service candidates for being deputed to the Post Graduate Super Speciality Courses.

5. Therefore, Government of Karnataka hereby determines the intake of Post Graduate Super Speciality Courses in Government Autonomous Medical Institutions, under section 456(10)(b) of the Rajiv Gandhi University of Health Sciences Act, 1994 and publishes the seat matrix thereof applicable for the current academic year 2011-12 as specified in **Annexure**. The Entrance Test Committee shall conduct the counseling and allot the candidates to the respective colleges in terms of the RGUHS Ordinance governing Conduct of Entrance Test for Admission to PGSSCs-2002.

By Order and in the name of the Governor of Karnataka,

**A.K.BHYRAPPA**

Under Secretary to Government-2,

Health and Family Welfare Department,

(Medical Education)

**ANNEXURE to Government Notification No.HFW 101 RGU 2011 dated 04.07.2011**

Statement showing the distribution of seats in respect of various Post Graduate Super Speciality Courses reserved for In-service and Entrance Test candidates in Government Medical College and Government Autonomous Institutions applicable for the Academic year 2011-12

| Sl. No. | Name of the College | Name of the Super Speciality Course | Total Govt., Seats | In-service Quota | Entrance Quota |
|---|---|---|---|---|---|
| 1. | Bangalore Medical College and Research Institute, Bangalore. | 1. M.Ch. Plastic Surgery | 04 | 02 | 02 |
| | | 2. M.Ch. Urology | 02 | 01 | 01 |
| | | 3. M.Ch. Gastro Entrology | 01 | 01 | - |
| | | 4. DM Neurology | 02 | 01 | 01 |
| | | 5. M.Ch. Paediatric Surgery | 03 | 02 | 01 |
| 2. | Kidwai Memorial Institute of Oncology, Bangalore. | 1. M.Ch. Surgical Oncology | 08 | 04* | 04 |
| | | 2. DM Oncology | 06 | 03 | 03 |
| 3. | Vijayanagara Institute of Medical Sciences, Bellary | M.Ch.Urology | 04 | 02 | 02 |
| 4. | Sri Jayadeva Institute of Cardiology, Bangalore | 1. DM Cardiac Anaesthesia | 08 | 04 | 04 |
| | | 2. DM Cardiology | 21 | 10** | 11 |
| | | 3. M.Ch. Cardio Thorasic Surgery | 12 | 06 | 06 |
| 5. | Institute of Nephro Urology, Bangalore | 1. DM Nephrology | 02 | 01 | 01 |
| | | 2. M.Ch. Urology / Genito - Urinary Surgery | 06 | 03 | 03 |

| Sl. No. | Name of the College | Name of the Super Speciality Course | Total Govt., Seats | In-service Quota | Entrance Quota |
|---|---|---|---|---|---|
| 6. | Indira Gandhi Child Health Institute, Bangalore | M.Ch. Paediatric Surgery | 01 | - | 01 |
| | | | **80** | **40** | **40** |

* One Surgical Oncology seat is reserved for the candidates who has done MS Ortho, MS ENT, MD OBG.

** One DM Cardiology seat is reserved for the candidate who has done MD Paediatrics

**A.K.BHYRAPPA**
Under Secretary to Government-2,
Health and Family Welfare Department,
(Medical Education)

PR-738

**HEALTH AND FAMILY WELFARE SECRETARIAT**

**NOTIFICATION**

**No. HFW 58 RGU 2011, Bangalore, dated 13-07-2011**

**Sub:** Determination of intake and publication of the additional seat matrix of UG Medical and Dental courses in Government and Private Medical/Dental Colleges for the academic year 2011-12.

**Ref:** Director of Medical Education in her Letter No.MCS / 9 / 2011-12, dated 07.07.2011

Government of Karnataka have promulgated an Act (Act 23/2011) called the Karnataka Professional Educational Institutions (Regulation of Admission and Fixation of Fee)(Special Provisions) Act, 2011." In compliance of the provisions of this Act and the consensual agreement reached between the Government and Private Unaided Professional Educational Institutions with regard to admission and fixation of fees for professional courses, Government shall notify the number of seats to be allotted and fee chargeable for the academic year 2011-12 for the students selected for Medical and Dental Courses.

2) As per section 4 of the said Act, Government shall notify the Fee Structure to be chargeable for the academic year 2011-12 from the candidates selected for Medical and Dental Courses as per the consensual agreement reached between the Government and Private Unaided Professional Educational Institutions.

3) In pursuant of section 5 of the Act, and as per the consensual agreement reached between the Government and Private Unaided Professional Educational Institutions, 40% of the Government seats for Medical and 35% for Dental in Non-Minority Private Unaided Professional Educational Institutions and 25% of the Government seats for Medical and 25% of the Government seats for Dental in Minority Private Unaided Professional Educational Institutions are earmarked for the candidates selected by Karnataka Examination Authority to Medical and Dental Courses for the academic year 2011-12.

4) In pursuance of the section 4 of the Act, Government hereby notify the fee chargeable for the academic year 2011-12 from the candidates selected for Medical and Dental Courses as shown in **Annexure-IV**.

5) The Director of Medical Education in her letter No:MCS/9/2011-12, dated 07.07.2011 has sent proposal for notification of additional seat matrix for the year 2011-12 for UG Medical/Dental Sciences in Government Autonomous Institution/the Government seats in Private Medical/Dental Institutions.

6) Therefore, in exercise of powers conferred under section 5(2) of "the Karnataka Professional Educational institutions (Regulation of admission and Fixation of Fee)(Special Provisions) Act, 2006" Government hereby notify the additional seat matrix and fee structure for the academic year 2011-12 for Medical and Dental UG (MBBS/BDS) Courses, in Government Autonomous Institutions and Government quota in Private Unaided Professional Educational Institutions as per **ANNEXURE I to III** appended to this notification.

By Order and in the name of the Governor of Karnataka,

**A.K.BHYRAPPA**
Under Secretary to Government-2,
Health and Family Welfare Department,
(Medical Education)

**ANNEXURE – 1A to Government Notification No.HFW 58 RGU 2011, Dated 13.07.2011**

**Additional Seat Matrix of MBBS seats Government/Private Medical Colleges and Deemed universities seats for the Academic year 2011-12 ( IInd round)**

| Sl. No. | Name of the Government Colleges | Total Seats | All India Quota seats 15% | State Government Seats 85% | Management Seats - | Remarks |
|---|---|---|---|---|---|---|
| 1 | Bangalore Medical College & Research Institute, Bangalore. | 100 | 15 | 85 | | |
| 2 | Mysore Medical College & Research Institute, Mysore | 50 | 7 | 43 | | |
| 3 | Hassan Institute of Medical Sciences, Hassan | 100 | 15 | 85 | | |
| 4 | Mandya Institute of Medical Sciences, Mandya | 100 | 15 | 85 | | |
| 5 | Bidar Institute of Medical Sciences, Bidar | 100 | 15 | 85 | | |
| 6 | Shimoga Institute of Medical Sciences, Shimoga | 100 | 15 | 85 | | |
| 7 | Raichur Institute of Medical Sciences, Raichur | 100 | 15 | 85 | | |
| | **TOTAL** | **650** | **97** | **553** | | |

**PRIVATE MEDICAL COLLEGES**

| Sl. No. | Name of the Colleges | Total seats | AIQ | Government Seats 25% | Management Seats 75% | Remarks |
|---|---|---|---|---|---|---|
| 1. | A.J. Institute of Medical Sciences, Mangalore. | 50 | - | 12 | 38 | |
| 2. | Rajarajeshwari Medical College, Bangalore. | 50 | - | 12 | 38 | |
| 3. | Sapthagiri Institute of Medical Sciences, Bangalore. | 150 | - | 37 | 113 | |
| 4. | Srinivasa Institute of Medical Research centre, Srinivasa Nagar. | 150 | - | 37 | 113 | |
| | **Total** | **400** | **-** | **98** | **302** | |
| | **GRAND TOTAL** | **1050** | **97** | **651** | **302** | |

**DEEMED UNIVERSÉITY**

| Sl. No. | Name of the College | Total Seats | AIQ | Government Seat 25% | Management Seat 75% | Remarks |
|---|---|---|---|---|---|---|
| | DEEMED UNIVERSÉITY | | | | | |

| Sl. No. | Name of the College | Total Seats | AIQ | Government Seat 25% | Management Seat 75% | Remarks |
|---|---|---|---|---|---|---|
| 1 | K.S.Hegde Medical Academy, Mangalore | 50 | - | 12 | 38 | |
| 2 | Yenepoya Medical College, Mangalore | 50 | - | 12 | 38 | |
| | **Total** | **100** | **-** | **24** | **76** | |

**A.K.BHYRAPPA**
Under SÉecretary to Government-2,
Health and Family Welfare Department,
(Medical Education)

**ANNEXURE-II to Government Notification No.HFW 58 RGU 2011, Dated 13.07.2011**

**Distribution of I MBBS Government Seats among various Special Categories both in Government and Private Medical Colleges for the academic year 2011-12.**

| Sl. No. | Name of the College | Govt. seats | Def. | Ex. Def | Scout/ Guide | ports | NCC | Anglo Indian | PH | Kashmiri Migrants | Total | Bal. |
|---|---|---|---|---|---|---|---|---|---|---|---|---|
| 1 | Bangalore Medical College & Research Institute, Bangalore. | 85 | | | | | | | **2** | **-** | **2** | **83** |
| 2 | Mysore Medical College & Research Institute, Mysore | 43 | | | | | | | **1** | **-** | **1** | **42** |
| 3 | Hassan Institute of Medical Sciences, Hassan | 85 | | | | | | | **2** | **1** | **3** | **82** |
| 4 | Mandya Institute of Medical Sciences, Mandya | 85 | | | | | | | **3** | **1** | **4** | **81** |
| 5 | Bidar Institute of Medical Sciences, Bidar | 85 | | | | | | | **3** | **1** | **4** | **81** |
| 6 | Shimoga Institute of Medical Sciences, Shimoga | 85 | | | | | | | **2** | **1** | **3** | **82** |
| 7 | Raichur Institute of Medical Sciences, Raichur | 85 | | | | | | | **2** | **1** | **3** | **82** |
| | **PRIVATE MEDICAL COLLEGES** | | | | | | | | | | | |
| 1. | A.J. Institute of Medical Sciences, Mangalore. | 12 | | | | | | | **1** | | **1** | **11** |
| 2. | Rajarajeshwari Medical College, Bangalore. | 12 | | | | | | | **-** | | **-** | **12** |

| Sl. No. | Name of the College | Govt. seats | Def. | Ex. Def | Scout/ Guide | ports | NCC | Anglo Indian | PH | Kashmiri Migrants | Total | Bal. |
|---|---|---|---|---|---|---|---|---|---|---|---|---|
| 3. | Sapthagiri Institute of Medical Sciences, Bangalore. | 37 | | | | | | | **-** | | **-** | **37** |
| 4. | Srinivasa Institute of Medical Research centre, Srinivasa Nagar. | 37 | | | | | | | **1** | | **1** | **36** |
| | **DEEMED UNIVERSITY** | | | | | | | | | | | |
| 1 | K.S.Hegde Medical Academy, Mangalore | 12 | | | | | | | **1** | | **1** | **11** |
| 2 | Yenepoya Medical College, Mangalore | 12 | | | | | | | **1** | | **1** | **11** |
| | **Total** | **24** | | | | | | | **2** | | **2** | **22** |
| | **GRAND TOTAL** | **675** | | | | | | | **19** | **5** | **24** | **651** |

**A.K.BHYRAPPA**

Under SÉecretary to Government-2,

Health and Family Welfare Department,

(Medical Education)

**ANNEXURE-III to Government Notification No.HFW 58 RGU 2011, Dated 13.07.2011**

**STATEMENT OF I MBBS GOVERNMENT SEATS UNDER GENERAL, RURAL AND KANNADA MEDIUM FOR THE ACADEMIC YEAR 2011-12.**

| Sl. No. | Name of the College | Govt. Seats | GM | | | Cat-I | | | 2A | | | 2B | | | 3A | | | 3B | | | SC | | | ST | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | G | R | KM | G | R | KM | G | R | KM | G | R | KM | G | R | KM | G | R | KM | G | R | KM | G | R | KM |
| 1 | Bangalore Medical College & Research Institute, Bangalore. | 83 | 34 | 6 | 2 | 2 | 1 | | 9 | 2 | 1 | 1 | 1 | 1 | 2 | 1 | 1 | 2 | 1 | 1 | 9 | 2 | 1 | 1 | 1 | 1 |
| 2 | Mysore Medical College & Research Institute, Mysore | 42 | 17 | 3 | 1 | 2 | | | 4 | 2 | | 2 | | | 3 | | | 2 | | | 4 | 1 | | | 1 | |

| Sl. No. | Name of the College | Govt. Seats | GM | | | Cat-I | | | 2A | | | 2B | | | 3A | | | 3B | | | SC | | | ST | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | G | R | KM | G | R | KM | G | R | KM | G | R | KM | G | R | KM | G | R | KM | G | R | KM | G | R | KM |
| 3 | Hassan Institute of Medical Sciences, Hassan | **82** | **33** | **6** | **2** | **3** | | | **9** | **1** | **1** | **4** | | | **3** | **1** | | **3** | **1** | | **9** | **2** | **1** | **3** | | |
| 4 | Mandya Institute of Medical Sciences, Mandya | **81** | **33** | **6** | **2** | **3** | **1** | | **9** | **2** | **1** | **3** | | | **3** | | | **3** | | **1** | **9** | **2** | **1** | **2** | | |
| 5 | Bidar Institute of Medical Sciences, Bidar | **81** | **32** | **6** | **2** | **3** | | | **10** | **2** | **1** | **2** | **1** | | **4** | | | **3** | **1** | | **9** | **2** | | **2** | **1** | |
| 6 | Shimoga Institute of Medical Sciences, Shimoga | **82** | **33** | **6** | **2** | **2** | **1** | | **9** | **2** | **1** | **2** | **1** | | **3** | **1** | | **3** | **1** | | **9** | **2** | **1** | **2** | **1** | |
| 7 | Raichur Institute of Medical Sciences, Raichur | **82** | **33** | **6** | **2** | **3** | **1** | | **9** | **2** | | **3** | **1** | | **2** | **1** | | **3** | **1** | | **9** | **2** | **1** | **3** | | |
| | **PRIVATE MEDICAL COLLEGES** | | | | | | | | | | | | | | | | | | | | | | | | | |
| 1. | A.J. Institute of Medical Sciences, Mangalore. | 11 | 4 | | 1 | 1 | | | 2 | | | | | | | | | 1 | | | 2 | | | | | |
| 2. | Rajarajeshwari Medical College, Bangalore. | 12 | 5 | 1 | | | | | 2 | | | 1 | | | | | | 1 | | | 2 | | | | | |

| Sl. No. | Name of the College | Govt. Seats | GM | | | Cat-I | | | 2A | | | 2B | | | 3A | | | 3B | | | SC | | | ST | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | G | R | KM | G | R | KM | G | R | KM | G | R | KM | G | R | KM | G | R | KM | G | R | KM | G | R | KM |
| 3. | Sapthagiri Institute of Medical Sciences, Bangalore. | 37 | 15 | 3 | 1 | 1 | | | 5 | 1 | | 1 | | | 1 | | | 2 | | | 5 | 1 | | 1 | | |
| 4. | Srinivasa Institute of Medical Research centre, Srinivasa Nagar. | 36 | 14 | 3 | 1 | 1 | | | 5 | 1 | | 1 | | | 1 | | | 2 | | | 5 | 1 | | 1 | | |
| | **DEEMED UNIVERSITY** | | | | | | | | | | | | | | | | | | | | | | | | | |
| 1 | K.S.Hegde Medical Academy, Mangalore | 11 | 4 | 1 | | 1 | | | 2 | | | | | | | | | 1 | | | 2 | | | | | |
| 2 | Yenepoya Medical College, Mangalore | 11 | 4 | 1 | 1 | 1 | | | 2 | | | | | | | | | | | | 2 | | | | | |
| | **Total** | **651** | **261** | **48** | **17** | **21** | **4** | **1** | **77** | **15** | **5** | **20** | **4** | **1** | **22** | **4** | **1** | **26** | **5** | **2** | **77** | **15** | **5** | **15** | **4** | **1** |

**A.K.BHYRAPPA**

Under SÉecretary to Government-2,

Health and Family Welfare Department,

(Medical Education)

PR-747

**ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಎಂಡಬ್ಲ್ಯೂಡಿ 04 ಡಬ್ಲ್ಯೂಹೆಚ್‌ಜೆ 2008, ಬೆಂಗಳೂರು, ದಿನಾಂಕ:25.03.2011**

ಹಜ್ ಸಮಿತಿ ಅಧಿನಿಯಮ, 2002 (ಕೇಂದ್ರಾಧಿನಿಯಮ, 2002ರ 35) ರ 20 ಮತ್ತು 34ನೇ ಪ್ರಕರಣದೊಂದಿಗೆ ಓದಲಾದ 47ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮತ್ತು ಕೇಂದ್ರ ಸರ್ಕಾರದೊಂದಿಗೆ ಸಮಾಲೋಚಿಸಿ, ಕರ್ನಾಟಕ ಸರ್ಕಾರವು ಕೆಳಕಂಡ ನಿಯಮಗಳನ್ನು ಈ ಮೂಲಕ ರಚಿಸುತ್ತದೆ, ಎಂದರೆ:–

**ನಿಯಮಗಳು**

**ಭಾಗ– I**

**ಪ್ರಾರಂಭಿಕ**

1. **ಹೆಸರು ಮತ್ತು ಪ್ರಾರಂಭ:**

(1) ಈ ನಿಯಮಗಳನ್ನು ಕರ್ನಾಟಕ ರಾಜ್ಯ ಹಜ್ ಸಮಿತಿ ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಂದು ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು:**ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು:–

(ಎ) "ಅಧಿನಿಯಮ" ಎಂದರೆ ಹಜ್ ಸಮಿತಿ ಅಧಿನಿಯಮ, 2002 (ಕೇಂದ್ರಾಧಿನಿಯಮ,2002ರ 35).

(ಬಿ) "ಅಧ್ಯಕ್ಷ" ಎಂದರೆ ಕರ್ನಾಟಕ ರಾಜ್ಯ ಹಜ್ ಸಮಿತಿಯ ಅಧ್ಯಕ್ಷ.

(ಸಿ) "ಸಮಿತಿ" ಎಂದರೆ 3ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಕರ್ನಾಟಕ ರಾಜ್ಯ ಹಜ್ ಸಮಿತಿ, ಬೆಂಗಳೂರು

(ಡಿ) " ಪ್ರಕರಣ" ಎಂದರೆ ಅಧಿನಿಯಮದ ಪ್ರಕರಣ

(ಇ) "ಅನುಸೂಚಿ" ಎಂದರೆ ಅಧಿನಿಯಮದ ಅನುಸೂಚಿ

(ಎಫ್) "ವಲಯ" ಎಂದರೆ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ವಲಯ.

**ಭಾಗ –II**

**ಸಮಿತಿಯ ಸದಸ್ಯರ ನಾಮನಿರ್ದೇಶನಗಳು ಅಥವಾ ಆಯ್ಕೆಗಳು**

3. **ಸಮಿತಿಯ ಕೇಂದ್ರ ಕಚೇರಿ:–**

ಸಮಿತಿಯು ಬೆಂಗಳೂರಿನಲ್ಲಿ ತನ್ನ ಕೇಂದ್ರ ಕಚೇರಿಯನ್ನು ಹೊಂದಿರತಕ್ಕದ್ದು.

4. **ಅಧ್ಯಕ್ಷ ಮತ್ತು ಇತರ ಸದಸ್ಯರಿಗೆ ಸಂದಾಯಮಾಡಬೇಕಾದ ಭತ್ಯೆಗಳು;**

ಅಧ್ಯಕ್ಷ ಮತ್ತು ಸದಸ್ಯರಿಗೆ ಸಂದಾಯಮಾಡಬೇಕಾದ ಭತ್ಯೆಗಳು ಹಾಗೂ ಇತರ ನಿಬಂಧನೆಗಳು ಮತ್ತು ಷರತ್ತುಗಳು:–

ಎ) ವಿಮಾನ ಪ್ರಯಾಣ ಹೊರತು, ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯು, ರಾಜ್ಯ ಸಿವಿಲ್ ಸೇವೆಯ ವರ್ಗ–ಎ ಅಧಿಕಾರಿಗೆ ಅನ್ವಯಿಸುವಂತೆಯೇ ಇರತಕ್ಕದ್ದು; ಸರ್ಕಾರದ ಪೂರ್ವಾನುಮೋದನೆಯೊಂದಿಗೆ ವಿಮಾನದ ಮೂಲಕ ಮಾಡತಕ್ಕ ವಿಮಾನ ಪ್ರಯಾಣದರ

ಬಿ) ಹಜ್ ಸಮಿತಿ ಸಭೆಗಳಿಗೆ ಹಾಜರಾಗುವ ಪ್ರತಿಯೊಬ್ಬ ಸದಸ್ಯನಿಗೆ ದಿನಭತ್ಯೆಯಾಗಿ 500/– ರೂ.ಗಳ (ಐದುನೂರು ರೂಪಾಯಿಗಳು ಮಾತ್ರ) ಉಪವೇಶನ ಶುಲ್ಕ.

(ಸಿ) ಅಧ್ಯಕ್ಷ /ಸದಸ್ಯರು ಮಾಡತಕ್ಕ ಎಲ್ಲ ಪ್ರಯಾಣಗಳಿಗೆ ರಾಜ್ಯ ಸರ್ಕಾರದ ಪೂರ್ವಾನುಮತಿಯನ್ನು ಪಡೆದುಕೊಳ್ಳತಕ್ಕದ್ದು.

(ಡಿ) ಅಧ್ಯಕ್ಷನಿಗೆ ರಾಜ್ಯ ಸರ್ಕಾರವು ನಿರ್ಧರಿಸುವಂಥ ವಿಶೇಷ ಭತ್ಯೆಗಳನ್ನು ಸಂದಾಯಮಾಡತಕ್ಕದ್ದು.

5. **ಅಧ್ಯಕ್ಷನ ಆಯ್ಕೆ:**

ರಾಜ್ಯ ಸಮಿತಿಯು ಅಧ್ಯಕ್ಷನನ್ನು ಆಯ್ಕೆ ಮಾಡಲು ವಿಫಲವಾದರೆ, ಆಗ ರಾಜ್ಯ ಸರ್ಕಾರವು ಅದರ ಅಧ್ಯಕ್ಷನನ್ನಾಗಿ ರಾಜ್ಯ ಸಮಿತಿಯ ಸದಸ್ಯನನ್ನು ನೇಮಕ ಮಾಡಬಹುದು.

6. **ಸಮಿತಿಯ ಸಭೆ:**

ಸಮಿತಿಯ ರಚನೆ ಮತ್ತು ಅಧ್ಯಕ್ಷನ ಆಯ್ಕೆ ನಂತರ, ಸಮಿತಿಯು ಸಭೆಯನ್ನು ಅಧ್ಯಕ್ಷನು ನಿಗದಿಪಡಿಸಬಹುದಾದಂಥ ದಿನಾಂಕದಂದು, ವೇಳೆಯಲ್ಲಿ ಮತ್ತು ಸ್ಥಳದಲ್ಲಿ ನಡೆಸತಕ್ಕದ್ದು. ಆದರೆ, ಯಾವುದೇ ಕಾರಣಕ್ಕಾಗಿ ಅಂಥ ಸಭೆಯನ್ನು ನಿಗದಿಪಡಿಸಿದ ದಿನದಂದು ನಡೆಸದಿದ್ದರೆ ಅದನ್ನು ಅಧ್ಯಕ್ಷನು ನಿಗದಿಪಡಿಸತಕ್ಕ ಇತರ ಯಾವುದೇ ದಿನಾಂಕದಂದು ನಡೆಸತಕ್ಕದ್ದು.

7. **ಸದಸ್ಯರ ಮರುನಾಮನಿರ್ದೇಶನ:**

ಮರು ನಾಮನಿರ್ದೇಶನಕ್ಕಾಗಿ, ಅಧಿನಿಯಮದ 18ನೇ ಪ್ರಕರಣದ (1)ನೇ ಉಪ– ಪ್ರಕರಣದ (i) ಮತ್ತು (ii)ನೇ ಉಪ– ಖಂಡದಲ್ಲಿ ಹೇಳಲಾದ ಪ್ರವರ್ಗಗಳಲ್ಲಿ ಲಭ್ಯವಿದ್ದರೆ, ಆ ಪ್ರತಿಯೊಂದು ಪ್ರವರ್ಗದಿಂದ ಒಬ್ಬ ಸದಸ್ಯನ ಹೆಸರನ್ನು ಮತ್ತು 18ನೇ ಪ್ರಕರಣದ

(1)ನೇ ಉಪ– ಪ್ರಕರಣದ (iii)ನೇ ಉಪ–ಖಂಡದಲ್ಲಿ ಹೇಳಲಾದ ಪ್ರವರ್ಗದಿಂದ ಒಬ್ಬ ಸದಸ್ಯನ ಹೆಸರನ್ನು ಹಾಗೂ 18ನೇ ಪ್ರಕರಣದ (1)ನೇ ಉಪ–ಪ್ರಕರಣದಲ್ಲಿ ಹೇಳಲಾದ ಪ್ರವರ್ಗದಿಂದ ನಾಲ್ಕು ಸದಸ್ಯರ ಹೆಸರುಗಳನ್ನು ಪರಿಗಣಿಸತಕ್ಕದ್ದು.

8. **ಸಮಿತಿಯ ಕರ್ತವ್ಯಗಳು:**

ಸಮಿತಿಯು:–

(1) ಹಜ್ ಯಾತ್ರಿಗಳಿಗೆ ಮೆನಿಂಜೈಟಿಸ್, ಕಾಲರ ಹಾಗೂ ಪೋಲಿಯೋ ಚುಚ್ಚುಮದ್ದುಗಳಂಥ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುವ ಶಿಬಿರಗಳನ್ನು ಏರ್ಪಡಿಸಲು

(2) ಬಯಸುವ ಹಜ್ ಯಾತ್ರಿಗಳಿಗೆ ಬೆಂಗಳೂರು ಮತ್ತು ಜಿಲ್ಲಾ ಕೇಂದ್ರಸ್ಥಾನಗಳಲ್ಲಿ ಪರಿಚಯ ಕಾರ್ಯಕ್ರಮವನ್ನು ಏರ್ಪಡಿಸಲು

(3) ಹಜ್ ಯಾತ್ರಿಗಳು ಸೌದಿ ಅರೇಬಿಯಾಕ್ಕೆ ಹೋಗಲು ವಿಮಾನ ಅಥವಾ ಹಡಗನ್ನು ಹತ್ತಲು ಮತ್ತು ಅಲ್ಲಿಂದ ಬರಲು ವಿಮಾನ ಅಥವಾ ಹಡಗನ್ನು ಹತ್ತುವುದಕ್ಕೆ ಸೌಲಭ್ಯಗಳನ್ನು ಒದಗಿಸಲು

(4) ಹಜ್ ಯಾತ್ರಿಗಳ ಸುಗಮ ಪ್ರಯಾಣಕ್ಕಾಗಿ ಏರ್‌ಲೈನ್ಸ್/ ವಿಮಾನ ನಿಲ್ದಾಣ ಪ್ರಾಧಿಕಾರಗಳು, ವಲಸೆ, ಸೀಮಾ ಸುಂಕಗಳು, ಸಿಐಎಸ್‌ಎಫ್, ಭಾರತ ವಿಮಾನ ನಿಲ್ದಾಣ ಪ್ರಾಧಿಕಾರ ಮುಂತಾದಂಥ ವಿವಿಧ ಪ್ರಾಧಿಕಾರಗಳೊಂದಿಗೆ ಸಂಪರ್ಕ ಬೆಳೆಸಲು

(5) ಹಜ್ ಯಾತ್ರಿಗಳ ಸುಗಮವಾದ ಮತ್ತು ಯಶಸ್ವಿಯಾದ ಪ್ರಯಾಣಕ್ಕಾಗಿ ಅಗತ್ಯವಾದಂಥ ಇತರ ಎಲ್ಲ ಕಾರ್ಯಚಟುವಟಿಕೆಗಳನ್ನು ನಡೆಸಲು;

(6) ಹಜ್‌ಯಾತ್ರಿಗಳ ಕಲ್ಯಾಣಕ್ಕಾಗಿ ರಾಜ್ಯ ಸರ್ಕಾರವು ನಿರ್ದೇಶಿಸುವಂಥ ಎಲ್ಲ ಕಾರ್ಯಗಳನ್ನು ಮಾಡಲು

– ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಮೇಲಿನ ಧ್ಯೇಯೋದ್ದೇಶವನ್ನು ಈಡೇರಿಸಲು ಉಪಸಮಿತಿಗಳ ಅಗತ್ಯವಿದ್ದರೆ, ಉಪಸಮಿತಿಗಳನ್ನು ರಚಿಸಬಹುದು.

9. **ಸಭೆಗಳನ್ನು ಏರ್ಪಡಿಸುವುದು:**

ಕಾರ್ಯನಿರ್ವಹಣಾಧಿಕಾರಿಯು ಅಧ್ಯಕ್ಷರೊಂದಿಗೆ ಸಮಾಲೋಚಿಸಿ ವೇಳಾಪಟ್ಟಿ ಪ್ರಕಾರ ನಿಯತ ಸಮಿತಿ ಸಭೆಗಳನ್ನು ಏರ್ಪಡಿಸಲು ಮತ್ತು ಅದರ ವ್ಯವಹರಣೆಗಳನ್ನು ದಾಖಲಿಸಲು ಹೊಣೆಯಾಗಿರತಕ್ಕದ್ದು.

## ಅಧ್ಯಾಯ– III

## ಸಮಿತಿಯ ಅಧಿಕಾರಿಗಳು ಮತ್ತು ಇತರ ನೌಕರರ ನಿಬಂಧನೆಗಳು ಮತ್ತು ಷರತ್ತುಗಳು

10. **ಸಮಿತಿಯ ಸಿಬ್ಬಂದಿ ವರ್ಗದ ಮಾದರಿ:–**

ಸಮಿತಿಯು, ಈ ಮುಂದಿನ ಕೋಷ್ಟಕದ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಪದವೃಂದಗಳನ್ನು ಮತ್ತು ಅದರ (4) ಮತ್ತು (5)ನೇ ಅಂಕಣಗಳಲ್ಲಿನ ಸಂವಾದಿ ನಮೂದುಗಳಲ್ಲಿ ನಿರ್ದಿಷ್ಟಪಡಿಸಿರುವಂಥ ನೇಮಕಾತಿ ವಿಧಾನ ಹಾಗೂ ಕನಿಷ್ಠ ವಿದ್ಯಾರ್ಹತೆಗಳನ್ನು ಹೊಂದಿರಬಹುದು:–

**ಕೋಷ್ಟಕ**

| ಕ್ರ. ಸಂ. | ಹುದ್ದೆಯ ಪ್ರವರ್ಗ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|
| 1 | 2 | 3 | 4 | 5 |
| 1 | ಕಾರ್ಯನಿರ್ವಹಣಾಧಿಕಾರಿ | 1 | ರಾಜ್ಯ ಸರ್ಕಾರವು ನೇಮಕ ಮಾಡತಕ್ಕದ್ದು | ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅಧಿಕಾರಿಯಾಗಿರಬೇಕು |
| 2 | ಸಹಾಯಕ ಕಾರ್ಯನಿರ್ವಹಣಾಧಿಕಾರಿ | 1 | ರಾಜ್ಯ ಸರ್ಕಾರವು ಪ್ರತಿನಿಯೋಜನೆ ಮೇಲೆ ನೇಮಕ ಮಾಡತಕ್ಕದ್ದು | ವರ್ಗ 'ಬಿ' ಅಧಿಕಾರಿ |
| 3 | ಲೆಕ್ಕ ಗುಮಾಸ್ತ /ವ್ಯವಸ್ಥಾಪಕ | 1 | ರಾಜ್ಯ ಸರ್ಕಾರವು ರಾಜ್ಯ ಲೆಕ್ಕಪತ್ರಗಳ ಇಲಾಖೆಯಿಂದ ಒಬ್ಬ ಲೆಕ್ಕ ಗುಮಾಸ್ತನನ್ನು ಪ್ರತಿನಿಯೋಜನೆ ಮೂಲಕ ನೇಮಕ ಮಾಡತಕ್ಕದ್ದು | ವರ್ಗ 'ಸಿ' ಅಧಿಕಾರಿ |

| ಕ್ರ. ಸಂ. | ಹುದ್ದೆಯ ಪ್ರವರ್ಗ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|
| 1 | 2 | 3 | 4 | 5 |
| 4 | ಶೀಘ್ರಲಿಪಿಕಾರರು ಹಾಗೂ ಕಂಪ್ಯೂಟರ್ ಆಪರೇಟರ್ | 1 | ಪ್ರತಿನಿಯೋಜನೆ ಮೂಲಕ ಅಥವಾ ಹೊರಗುತ್ತಿಗೆ ಮುಖಾಂತರ ತುಂಬತಕ್ಕದ್ದು | ಎಸ್‌ಎಸ್‌ಎಲ್‌ಸಿ, ಸೀನಿಯರ್ ಟೈಪ್‌ರೈಟಿಂಗ್ ಮತ್ತು ಶೀಘ್ರಲಿಪಿ ಹಾಗೂ ಕಂಪ್ಯೂಟರ್ ಜ್ಞಾನ |
| 5 | ಪ್ರಥಮ ದರ್ಜೆ ಸಹಾಯಕರು | 2 | ಪ್ರತಿನಿಯೋಜನೆ ಮೂಲಕ ಅಥವಾ ಹೊರಗುತ್ತಿಗೆ ಮುಖಾಂತರ ತುಂಬತಕ್ಕದ್ದು | ದ್ವಿ.ದ.ಸ. ಪದವೃಂದದಲ್ಲಿ ಮೂರು ವರ್ಷಗಳಿಗಿಂತ ಕಡಿಮೆಯಲ್ಲದಂತೆ ಸೇವೆಯನ್ನು ಸಲ್ಲಿಸಿರಬೇಕು |
| 6 | ದ್ವಿತೀಯ ದರ್ಜೆ ಸಹಾಯಕರು | 4 | ಪ್ರತಿನಿಯೋಜನೆ ಮೂಲಕ ಅಥವಾ ಹೊರಗುತ್ತಿಗೆ ಮುಖಾಂತರ ತುಂಬತಕ್ಕದ್ದು | ಎಸ್‌ಎಸ್‌ಎಲ್‌ಸಿ ಹಾಗೂ ಕಂಪ್ಯೂಟರ್ ಜ್ಞಾನ |
| 7 | ಕಂಪ್ಯೂಟರ್ ಆಪರೇಟರ್ ಗಳು | 2 | ಪ್ರತಿನಿಯೋಜನೆ ಮೂಲಕ ಅಥವಾ ಹೊರಗುತ್ತಿಗೆ ಮುಖಾಂತರ ತುಂಬತಕ್ಕದ್ದು | ಎಸ್‌ಎಸ್‌ಎಲ್‌ಸಿ ಹಾಗೂ ಕಂಪ್ಯೂಟರ್ ಅಪ್ಲಿಕೇಷನ್ ನಲ್ಲಿ ಡಿಪ್ಲೊಮ |
| 8 | ಕಚೇರಿ ಸೇವಕರು | 4 | ಪ್ರತಿನಿಯೋಜನೆ ಮೂಲಕ ಅಥವಾ ಹೊರಗುತ್ತಿಗೆ ಮುಖಾಂತರ ತುಂಬತಕ್ಕದ್ದು | ಎಸ್‌ಎಸ್‌ಎಲ್‌ಸಿ |
| 9 | ಜಾಡಮಾಲಿಗಳು | 3 | ಪ್ರತಿನಿಯೋಜನೆ ಮೂಲಕ ಅಥವಾ ಹೊರಗುತ್ತಿಗೆ ಮುಖಾಂತರ ತುಂಬತಕ್ಕದ್ದು | VII ನೇ ತರಗತಿ |
| 10 | ವಾಹನಚಾಲಕರು | 2 | ಪ್ರತಿನಿಯೋಜನೆ ಮೂಲಕ ಅಥವಾ ಹೊರಗುತ್ತಿಗೆ ಮುಖಾಂತರ ತುಂಬತಕ್ಕದ್ದು | VIIನೇ ತರಗತಿ ಹಾಗೂ ಲಘು ಮೋಟಾರು ವಾಹನ ಚಾಲನೆ ಪರವಾನಗಿ |

**11. ಸಮಿತಿಯ ನೌಕರರಿಗೆ ಅನ್ವಯವಾಗತಕ್ಕ ನಿಯಮಗಳು:–**

(1)ಕಾಲಕಾಲಕ್ಕೆ ತಿದ್ದುಪಡಿ ಮಾಡಲಾದಂಥ ಕರ್ನಾಟಕ ಸಿವಿಲ್ ಸೇವಾ ನಿಯಮಗಳು ಮತ್ತು ಸರ್ಕಾರಿ ನೌಕರರ ಸೇವಾ ಷರತ್ತುಗಳನ್ನು ಒಳಗೊಂಡಿರುವ ಎಲ್ಲ ನಿಯಮಗಳು ಪ್ರತಿನಿಯೋಜನೆ ಮೇಲೆ ಬಂದಿರುವ ಸಮಿತಿಯ ನೌಕರರ ಸೇವೆಗಳನ್ನು ಒಳಗೊಂಡಿರುವ ಎಲ್ಲ ವಿಷಯಗಳಿಗೆ ಅನ್ವಯವಾಗತಕ್ಕದ್ದು.

**12. ನೇಮಕಾಧಿಕಾರಿ, ಶಿಸ್ತುಕ್ರಮಾಧಿಕಾರಿ ಹಾಗೂ ಅಪೀಲು ಪ್ರಾಧಿಕಾರಿ:**

(1) ಸರ್ಕಾರಿ ನೌಕರರಿಗೆ ಅನ್ವಯವಾಗುವಂಥ ಕರ್ನಾಟಕ ಸಿವಿಲ್ ಸೇವಾ (ನಿಯಂತ್ರಣ, ವರ್ಗೀಕರಣ ಮತ್ತು ಅಪೀಲು) ನಿಯಮಗಳು, 1957ರಲ್ಲಿ ಒಳಗೊಂಡಿರುವ ಉಪಬಂಧಗಳು ಸಹ ಈ ಕೆಳಕಂಡ ಮಾರ್ಪಾಡುಗಳಿಗೊಳಪಟ್ಟು ಸಮಿತಿಯ ಅಧಿಕಾರಿಗಳು/ನೌಕರರಿಗೆ ಅನ್ವಯವಾಗುತ್ತವೆ, ಎಂದರೆ:–

(2) ಸಮಿತಿ ಅಡಿಯಲ್ಲಿ ಬರುವ ಹುದ್ದೆಗಳ ಸಂಬಂಧದಲ್ಲಿ ನೇಮಕಾಧಿಕಾರಿ, ಶಿಸ್ತುಕ್ರಮಾಧಿಕಾರಿ ಹಾಗೂ ಅಪೀಲು ಪ್ರಾಧಿಕಾರಿ ಈ ಮುಂದೆ ನಿರ್ದಿಷ್ಟಪಡಿಸಿರುವಂತಿರತಕ್ಕದ್ದು, ಎಂದರೆ:–

**ಕೋಷ್ಟಕ**

| ಹುದ್ದೆಗಳ ಪ್ರವರ್ಗ | ನೇಮಕಾಧಿಕಾರಿ | ಶಿಸ್ತು ಕ್ರಮಾಧಿಕಾರಿ | ಅಪೀಲು ಪ್ರಾಧಿಕಾರಿ |
|---|---|---|---|
| ವರ್ಗ–ಎ<br>ವರ್ಗ–ಬಿ | ಸರ್ಕಾರ<br>– ಅದೇ – | ಸರ್ಕಾರ<br>– ಅದೇ – | ಸರ್ಕಾರ<br>– ಅದೇ – |
| ವರ್ಗ–ಸಿ | ಕಾರ್ಯ ನಿರ್ವಹಣಾಧಿಕಾರಿ | ಕಾರ್ಯ ನಿರ್ವಹಣಾಧಿಕಾರಿ | ಸರ್ಕಾರ |
| ವರ್ಗ–ಡಿ | ಕಾರ್ಯ ನಿರ್ವಹಣಾಧಿಕಾರಿ | ಕಾರ್ಯ ನಿರ್ವಹಣಾಧಿಕಾರಿ | ಸರ್ಕಾರ |

**13. ಆರ್ಥಿಕ ನಿಯಮ ಪಾಲನೆ:–**

ಕರ್ನಾಟಕ ಆರ್ಥಿಕ ಸಂಹಿತೆ, ಕರ್ನಾಟಕ ಖಜಾನೆ ಸಂಹಿತೆ, ಸಾದಿಲ್ವಾರು ವೆಚ್ಚ ಕೈಪಿಡಿಯಲ್ಲಿ ಒಳಗೊಂಡಿರುವ ಉಪಬಂಧಗಳು ಆರ್ಥಿಕ ಅಧಿಕಾರಗಳ ಚಲಾವಣೆಯ ಸಂಬಂಧದಲ್ಲಿ ಅನ್ವಯವಾಗತಕ್ಕದ್ದು.

14. **ಕಾರ್ಯನಿರ್ವಹಣಾಧಿಕಾರಿಯ ಅಧಿಕಾರಗಳು:–**

(1) ಕಾರ್ಯನಿರ್ವಹಣಾಧಿಕಾರಿಯು ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿರುವಂತೆ ಆತನ ಕರ್ತವ್ಯಗಳ ಕ್ರಮಬದ್ಧ ನಿರ್ವಹಣೆಗೆ ಪ್ರಾಸಂಗಿಕವಾದ ಎಲ್ಲ ವೆಚ್ಚಗಳು ಮತ್ತು ಖರ್ಚುಗಳನ್ನು ವಹಿಸತಕ್ಕದ್ದು. ಕಾರ್ಯನಿರ್ವಹಣಾಧಿಕಾರಿಯು ಇಲಾಖಾ ಮುಖ್ಯಸ್ಥರಿಗೆ ವಹಿಸಿಕೊಡಲಾಗಿರುವಂಥ ಅದೇ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರಗಳನ್ನು ಹೊಂದಿರತಕ್ಕದ್ದು.

(2) ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಸಮಿತಿಯು ಲಿಖಿತದಲ್ಲಿನ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಅಂಥ ಅದರ ಅಧಿಕಾರಗಳನ್ನು, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳು ಮತ್ತು ಪರಿಮಿತಿಗಳಿಗೊಳಪಟ್ಟು, ಸಮಿತಿಯ ಅಧ್ಯಕ್ಷ ಅಥವಾ ಯಾರೇ ಸದಸ್ಯ ಅಥವಾ ಕಾರ್ಯನಿರ್ವಹಣಾಧಿಕಾರಿಗೆ ವಹಿಸಿಕೊಡಬಹುದು.

(3) ಕಾರ್ಯನಿರ್ವಹಣಾಧಿಕಾರಿಯು, ರಾಜ್ಯ ಸರ್ಕಾರವು ಅಧಿಕಾರಗಳನ್ನು ವಹಿಸಿಕೊಡವುದಕ್ಕೊಳಪಟ್ಟು, ಸಮಿತಿಯ ಕರ್ತವ್ಯಗಳ ನಿರ್ವಹಣೆಗೆ ಅಗತ್ಯವಾದ ಯಾವುದೇ ಕರಾರನ್ನು ಮಾಡಿಕೊಳ್ಳಲು ಅಥವಾ ಯಾವುದೇ ವೆಚ್ಚವನ್ನು ವಹಿಸಲು ಸಕ್ಷಮನಾಗಿರತಕ್ಕದ್ದು.

(4) ಸಂಬಳಗಳು, ವೈದ್ಯಕೀಯ ವೆಚ್ಚಗಳನ್ನು ತುಂಬಿಕೊಡುವುದು, ತೆರಿಗೆಗಳು, ದೂರವಾಣಿ ಬಿಲ್ಲುಗಳು, ವಿದ್ಯುಚ್ಛಕ್ತಿ ಬಿಲ್ಲುಗಳು, ನಿರ್ವಹಣೆ ವೆಚ್ಚಗಳು, ಸದಸ್ಯರ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ, ದುರಸ್ತಿ ಮತ್ತು ನಿರ್ವಹಣೆ ಮುಂತಾದ ರೀತಿಯ ಶಾಸನಬದ್ಧ ಸಂದಾಯಗಳನ್ನು ಕಾರ್ಯನಿರ್ವಹಣಾಧಿಕಾರಿಯು ಪಾವತಿಸತಕ್ಕದ್ದು.

(5) ಪ್ರತಿಯೊಂದು ಕರಾರು ಲಿಖಿತದಲ್ಲಿರತಕ್ಕದ್ದು ಮತ್ತು ಅದಕ್ಕೆ ಸಮಿತಿಯ ಪರವಾಗಿ ಕಾರ್ಯನಿರ್ವಹಣಾಧಿಕಾರಿಯು ಸಹಿ ಮಾಡತಕ್ಕದ್ದು.

(6) ರಾಜ್ಯ ಹಜ್ ಸಮಿತಿಯ ಕಾರ್ಯನಿರ್ವಹಣಾಧಿಕಾರಿಯು ಹಜ್ ವಿಷಯಗಳು ಮತ್ತು ಸಮಿತಿಯ ಕಾರ್ಯನಿರ್ವಹಣೆಗೆ ಸಂಬಂಧಿಸಿದ ಯಾವುದೇ ಕಾನೂನು ವಿಷಯಗಳ ಸಂಬಂಧದಲ್ಲಿ ದಾವೆ ಹೂಡಬಹುದು ಮತ್ತು ದಾವೆಗೆ ಒಳಗಾಗಬಹುದು.

(7) ಬ್ಯಾಂಕಿನ ಎಲ್ಲ ವ್ಯವಹಾರಗಳನ್ನು ಕಾರ್ಯನಿರ್ವಹಣಾಧಿಕಾರಿಯು ನಿರ್ವಹಿಸತಕ್ಕದ್ದು.

(8) ಕಾರ್ಯನಿರ್ವಹಣಾಧಿಕಾರಿಯು ಸರಕುಗಳ ಖರೀದಿ ಮತ್ತು ಹಜ್ ಸಮಿತಿಯ ಸೇವೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮವನ್ನು ಅನುಸರಿಸತಕ್ಕದ್ದು.

(9) ಅಧ್ಯಕ್ಷ/ ಸಮಿತಿಯು ಅಧಿನಿಯಮ/ನಿಯಮಗಳು ಮತ್ತು ಸರ್ಕಾರವು ಹೊರಡಿಸಿದ ನಿರ್ದೇಶನಗಳ ಉಲ್ಲಂಘನೆಯಲ್ಲಿ ಯಾವುದೇ ತೀರ್ಮಾನವನ್ನು ತೆಗೆದುಕೊಂಡಿದ್ದರೆ, ಆತನು ಇದನ್ನು ಸರ್ಕಾರಕ್ಕೆ ವರದಿ ಮಾಡತಕ್ಕದ್ದು ಮತ್ತು ಇದರ ಮೇಲಿನ ಸರ್ಕಾರದ ಆದೇಶಗಳು ಅಂತಿಮವಾಗಿರತಕ್ಕದ್ದು.

15. **ರಾಜ್ಯ ಹಜ್ ಸಮಿತಿಯ ನಿಧಿಗಳು:**

ರಾಜ್ಯ ಹಜ್ ಸಮಿತಿಯು ಕರ್ನಾಟಕ ರಾಜ್ಯ ಹಜ್ ಸಮಿತಿ ನಿಧಿ ಎಂದು ಕರೆಯುವ ತನ್ನ ಸ್ವಂತ ನಿಧಿಗಳನ್ನು ಹೊಂದಿರತಕ್ಕದ್ದು ಮತ್ತು ಈ ಕೆಳಕಂಡ ಮೊತ್ತಗಳನ್ನು ಅದಕ್ಕೆ ಜಮೆ ಮಾಡತಕ್ಕದ್ದು, ಎಂದರೆ:–

(1) ಸಮಿತಿಯು,

(ಎ) ಹಜ್‌ಗಾಗಿ ಅರ್ಜಿಗಳ ನೋಂದಣಿಗೆ ವಿಧಿಸಬಹುದಾಗಿರುವ ಯಾವುದೇ ಶುಲ್ಕಗಳು ಮತ್ತು ಸೇವಾವೆಚ್ಚಗಳಿಂದ ವಸೂಲು ಮಾಡಲಾದ ಮೊತ್ತಗಳು

(ಬಿ) ಹಜ್ ಆಚರಣೆಗಾಗಿ ಹಜ್ ಯಾತ್ರಿಗಳಿಂದ ಸಂಗ್ರಹಿಸಲಾದ ಹಣ

(ಸಿ) ಸಮಿತಿ ನಿಧಿಗಳ ಎಲ್ಲ ಠೇವಣಿಗಳು ಮತ್ತು ಹೂಡಿಕೆಗಳಿಂದ ಬರುವ ಆದಾಯ

(ಡಿ) ಮೃತ ಹಜ್ ಯಾತ್ರಿಗಳ ಆಸ್ತಿಗಳ ಮಾರಾಟದಿಂದ ವಸೂಲಾದ ಮೊತ್ತಗಳು ಮತ್ತು ರಾಜ್ಯ ಹಜ್ ಸಮಿತಿಗೆ ಮರಣಶಾಸನದ ಮೂಲಕ ಅವರಿಂದ ಬಿಟ್ಟುಕೊಟ್ಟಿರುವ, ಕ್ಲೇಮು ಮಾಡದಿರುವ ಹಾಗೂ ಅದಕ್ಕೆ ಸೇರಿರುವ ಹಣದ ಮೊತ್ತ ಇತ್ಯಾದಿ.

(2) ರಾಜ್ಯ ಸರ್ಕಾರ, ಕೇಂದ್ರ ಹಜ್ ಸಮಿತಿಯಿಂದ ರಾಜ್ಯ ಸಮಿತಿಗೆ ನೀಡಬಹುದಾದಂಥ ಯಾವುದೇ ಅನುದಾನ ಅಥವಾ ರಾಜ್ಯ ಸರ್ಕಾರದಿಂದ ಅನುಮೋದಿಸಲಾದಂಥ ಉದ್ದೇಶಗಳಿಗಾಗಿನ ಯಾವುದೇ ಇತರ ಮೂಲ.

(3) ಅಧಿನಿಯಮದ ಪ್ರಾರಂಭದ ಕಾಲದಲ್ಲಿ ರಾಜ್ಯ ಹಜ್ ಸಮಿತಿಯ ಹೆಸರಿನಲ್ಲಿ ಜಮೆ ಏನಾದರೂ ಆಗಿದ್ದರೆ, ಆ ಯಾವುದೇ ಮೊಬಲಗು

(4) ಹಜ್ ಸಮಿತಿಯ ಸ್ವತ್ತುಗಳಿಂದ ಬಾಡಿಗೆ ಮುಂಗಡ ಇತ್ಯಾದಿಯಾಗಿ ಸ್ವೀಕರಿಸಲಾದಂಥ ಎಲ್ಲ ಹಣ

(5) ಸಮಿತಿಯು ಹಜ್ ಸಮಿತಿಯ ಎಲ್ಲ ಸ್ಥಿರಾಸ್ತಿಗಳ ನಿರ್ಮಾಣ, ಮಾರಾಟ, ಖರೀದಿ, ಬಾಡಿಗೆ ಒಪ್ಪಂದ ಮುಂತಾದವುಗಳಿಗಾಗಿ ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದುಕೊಳ್ಳತಕ್ಕದ್ದು.

(6) ರಾಜ್ಯ ಸರ್ಕಾರವು ಹಜ್ ಯಾತ್ರಿಗಳ ಕಲ್ಯಾಣಕ್ಕಾಗಿ ಕಟ್ಟಡ/ ರಚನೆ ಮುಂತಾದವುಗಳನ್ನು ನಿರ್ಮಿಸಬಹುದು ಹಾಗೂ ಅದನ್ನು ಸರ್ಕಾರವು ಗೊತ್ತುಪಡಿಸಿದ ಷರತ್ತುಗಳ ಪ್ರಕಾರ ನಿರ್ವಹಿಸುವುದಕ್ಕಾಗಿ ಹಜ್ ಸಮಿತಿಗೆ ವಹಿಸಿಕೊಡಬಹುದು.

**16. ಬಜೆಟ್, ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ:**

(1) ಹಜ್ ಸಮಿತಿಯು, ಮುಂಬರುವ ಮುಂದಿನ ವರ್ಷದ ಏಪ್ರಿಲ್ 1ನೇ ದಿನದಂದು ಪ್ರಾರಂಭವಾಗುವ ವರ್ಷಕ್ಕಾಗಿನ ಸಮಿತಿಯ ಆದಾಯ ಮತ್ತು ವೆಚ್ಚದ ಒಂದು ಅಂದಾಜನ್ನು ಸಿದ್ಧಪಡಿಸತಕ್ಕದ್ದು ಹಾಗೂ ಅದನ್ನು ಪ್ರತಿವರ್ಷದ ಮಾರ್ಚ್ ಮೊದಲ ವಾರದಲ್ಲಿ ಅನುಮೋದನೆಗಾಗಿ ರಾಜ್ಯ ಸರ್ಕಾರಕ್ಕೆ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

(2) ಸರ್ಕಾರವು ಅಂದಾಜನ್ನು ಪರಿಶೀಲಿಸತಕ್ಕದ್ದು ಮತ್ತು ಅಂಥ ಅಂದಾಜುಗಳಿಗೆ ಮಂಜೂರಾತಿ ನೀಡತಕ್ಕದ್ದು ಅಥವಾ ತಿದ್ದುಪಡಿ ಮಾಡತಕ್ಕದ್ದು ಅಥವಾ ಅದು ಯೋಗ್ಯವೆಂದು ಭಾವಿಸಬಹುದಾದಂಥ ಬದಲಾವಣೆಗೆ ಒಳಪಡಿಸತಕ್ಕದ್ದು.

(3) ಬಜೆಟ್ ಅನುದಾನಗಳ ಜಮೆಗೆ ಸಂಬಂಧಿಸಿದ ಲೆಕ್ಕಪತ್ರಗಳ ವಿವರಪತ್ರಗಳು ಮತ್ತು ಪ್ರತಿ ಆರ್ಥಿಕ ವರ್ಷದ ಸಂಬಂಧದಲ್ಲಿ ಬಜೆಟ್ ಅನುದಾನಗಳಿಗೆ ಸಂಬಂಧಿಸಿದಂತೆ ವಹಿಸಿದ ವೆಚ್ಚದ ಲೆಕ್ಕಪತ್ರಗಳ ವಿವರಪತ್ರ ಹಾಗೂ ಎಲ್ಲ ಲೆಕ್ಕಪತ್ರಗಳನ್ನು ಕರ್ನಾಟಕ ಆರ್ಥಿಕ ಸಂಹಿತೆ ಅನುಸಾರ ಹಾಗೂ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ಸೂಚನೆಗಳನುಸಾರ ನಿರ್ವಹಿಸತಕ್ಕದ್ದು.

**17. ಸಮಿತಿ ನಿಧಿಗಳು ಮತ್ತು ಹೂಡಿಕೆಗಳಿಗೆ ಹಣ ಸಂದಾಯಗಳು:–**

(1) ಕಾರ್ಯನಿರ್ವಹಣಾಧಿಕಾರಿಯು ಸಮಿತಿ ನಿಧಿಗಳಿಗೆ ಎಲ್ಲ ಹಣಸಂದಾಯಗಳನ್ನು ಸ್ವೀಕರಿಸಲು ಮತ್ತು ಸಮಿತಿ ಪರವಾಗಿ ಅದರ ರಸೀದಿಗಳನ್ನು ನೀಡಲು ಹಾಗೂ ಸಮಿತಿ ಪರವಾಗಿ ಹಣಸಂದಾಯ ಮಾಡಲು ಅಧಿಕೃತಗೊಳಿಸಲಾಗಿದೆ.

(2) ಕಾರ್ಯನಿರ್ವಹಣಾಧಿಕಾರಿಯು, ಸಮಿತಿ ನಿಧಿಗಳ ಜಮೆಗೆ ಆತನು ಸ್ವೀಕರಿಸಿದ ಎಲ್ಲ ಹಣಕ್ಕೆ ರಸೀದಿಗಳನ್ನು ನೀಡಲು ಅಧಿಕೃತಗೊಳಿಸಲಾಗಿದೆ. ಈ ಉದ್ದೇಶಕ್ಕಾಗಿ ಮುದ್ರಿತ ರಸೀದಿ ಸಂಖ್ಯೆಗಳನ್ನು ಹೊಂದಿರುವ ಪಕ್ಕಾ ಪ್ರತಿ ರಸೀದಿಯನ್ನು ನಿರ್ವಹಿಸತಕ್ಕದ್ದು.

(3) ಎಲ್ಲ ಅಂಥ ಹಣವನ್ನು ಕೂಡಲೇ ಕರ್ನಾಟಕ ಹಜ್ ಸಮಿತಿ ಹೆಸರಿನ ಖಾತೆಯಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಮಾತ್ರ ಇಡತಕ್ಕದ್ದು.

(4) ಕಾರ್ಯನಿರ್ವಹಣಾಧಿಕಾರಿಯು ಬ್ಯಾಂಕ್ ಖಾತೆಯನ್ನು ನಿರ್ವಹಿಸಲು ಅಧಿಕಾರ ಹೊಂದಿರತಕ್ಕದ್ದು. ಯಾವುದೇ ಪರಿಸ್ಥಿತಿ ಕಾರಣದಿಂದ ಕಾರ್ಯನಿರ್ವಹಣಾಧಿಕಾರಿಯ ಅನುಪಸ್ಥಿತಿಯಲ್ಲಿ ಸಹಾಯಕ ಕಾರ್ಯನಿರ್ವಹಣಾಧಿಕಾರಿಯು ಬ್ಯಾಂಕ್ ಖಾತೆಯನ್ನು ನಿರ್ವಹಿಸಲು ಅಧಿಕೃತಗೊಳಿಸಬಹುದು.

(5) ಸಮಿತಿಯ ತಕ್ಷಣದ ಉದ್ದೇಶಕ್ಕಾಗಿ ಕೂಡಲೇ ಹಣಸಂದಾಯಮಾಡಲು ಅಗತ್ಯವಿದ್ದ ಹೊರತು, ಸಮಿತಿಯ ಕಚೇರಿಯಲ್ಲಿ ಇಟ್ಟುಕೊಳ್ಳುವುದಕ್ಕಾಗಿ ಬ್ಯಾಂಕ್‌ನಿಂದ ಯಾವುದೇ ಹಣವನ್ನು ಹಿಂತೆಗೆಯತಕ್ಕುದ್ದಲ್ಲ ಅಥವಾ ಸಮಿತಿಯ ಕಚೇರಿಯಲ್ಲಿ ಯಾವುದೇ ಹಣವನ್ನು ಇಟ್ಟುಕೊಳ್ಳತಕ್ಕುದ್ದಲ್ಲ.

ಪರಂತು, ತಕ್ಷಣದ ಉದ್ದೇಶಕ್ಕಾಗಿ ಕೂಡಲೇ ಹಣಸಂದಾಯ ಮಾಡಲು ಸಮಿತಿ ಕಚೇರಿಯಲ್ಲಿ ಹಣವನ್ನು ಇಟ್ಟುಕೊಳ್ಳುವುದಕ್ಕೆ ಮುಂಚೆ ಅಥವಾ ಸಮಿತಿಯ ಕಚೇರಿಯಲ್ಲಿ ಅದನ್ನು ಇಟ್ಟುಕೊಳ್ಳುವ ಉದ್ದೇಶಕ್ಕಾಗಿ ಬ್ಯಾಂಕ್‌ನಿಂದ ಹಣವನ್ನು ಹಿಂತೆಗೆದುಕೊಳ್ಳುವುದಕ್ಕೆ ಮುಂಚೆ, ಹಾಗೆ ಮಾಡುವುದಕ್ಕಾಗಿನ ಕಾರಣಗಳನ್ನು ದಾಖಲಿಸಿತಕ್ಕದ್ದು.

(6) ಕಾರ್ಯನಿರ್ವಹಣಾಧಿಕಾರಿಯು, ಯಾವುದೇ ಸಣ್ಣಪುಟ್ಟ ಖರ್ಚುಗಳಿಗಾಗಿ 10,000/–ರೂ. ಗಳನ್ನು ಮೀರದಿರುವ ನಷ್ಟಭರ್ತಿ ಮಾಡಬಹುದಾದ ಖಾಯಂ ಮುಂಗಡವನ್ನು ಹೊಂದಿರಲು ಅಧಿಕೃತಗೊಳಿಸಲಾಗಿದೆ.

(7) ವೆಚ್ಚಕ್ಕೆ ಜಮೆಗಳ ವಿನಿಯೋಗವನ್ನು ಮಾಡತಕ್ಕದ್ದಲ್ಲ.

(8) ಸಮಿತಿಯ ನಿಧಿಗಳಿಂದ 1000/– (ಒಂದು ಸಾವಿರ ರೂ. ಮಾತ್ರ) ರೂ.ಗಳನ್ನು ಮೀರುವ ಎಲ್ಲ ಸಂದಾಯಗಳನ್ನು ಚೆಕ್ಕು ಮೂಲಕ ಮಾಡತಕ್ಕದ್ದು.

(9) ಸಂದಾಯ ಮಾಡಬೇಕಾದ ಹಣವನ್ನು ಸಂದಾಯವಾಗದಂತೆ ಬಿಡತಕ್ಕುದಲ್ಲ ಮತ್ತು ಅದನ್ನು ಪೂರ್ಣವಾಗಿ ಅಗತ್ಯವಾಗುವ ದಿನಕ್ಕಿಂತ ಹೆಚ್ಚು ದಿನದವರೆಗೆ ಖಾತೆಯಿಂದ ಹೊರಗಿಡತಕ್ಕುದಲ್ಲ.

(10) ಸಮಿತಿಯ ಮೇಲೆ ಕ್ಲೇಮನ್ನು ಹೊಂದಿರುವ ಯಾವನೇ ವ್ಯಕ್ತಿ ವೋಚರ್ ಅನ್ನು ಸಲ್ಲಿಸತಕ್ಕದ್ದು ಹಾಗೂ ಅದಕ್ಕೆ ಮುಂಗಡ ರಸೀದಿಯನ್ನು ಲಗತ್ತಿಸತಕ್ಕದ್ದು.

(11) ಹಣ ಪಡೆಯುವವನು ತನ್ನ ಸ್ವೀಕೃತಿಯಲ್ಲಿ ಸಂದಾಯದ ದಿನಾಂಕವನ್ನು ನಮೂದಿಸತಕ್ಕದ್ದು.

(12) ಸಮಿತಿಯ ಮೇಲಿನ ಪ್ರತಿಯೊಂದು ಕ್ಲೇಮನ್ನು, ಅದನ್ನು ಸಂದಾಯ ಮಾಡುವುದಕ್ಕೆ ಮುಂಚೆ ಸಮಿತಿಯ ಲೆಕ್ಕಾಧಿಕಾರಿಯು ಪರಿಶೀಲಿಸತಕ್ಕದ್ದು. ಬಿಲ್ಲಿನಲ್ಲಿ ಮಾಡಿರುವ ಯಾವುದೇ ಹೆಚ್ಚುವರಿ ಸಂದಾಯವನ್ನು ಹಣ ಪಡೆಯುವವನಿಂದ ನಗದಾಗಿ ಅಥವಾ ಹಣ ಪಡೆಯುವವನ ತರುವಾಯದ ಬಿಲ್ಲಿನಿಂದ ಹೆಚ್ಚುವರಿಯಾಗಿ ಸಂದಾಯಮಾಡಿದ ಮೊತ್ತಕ್ಕೆ ಸಮನಾದ ಮೊತ್ತವನ್ನು ಕಡಿತಗೊಳಿಸುವ ಮೂಲಕ ವಸೂಲು ಮಾಡತಕ್ಕದ್ದು.

(13) ತಕ್ಷಣಕ್ಕೆ ಅಗತ್ಯವಿಲ್ಲದ ಯಾವುದೇ ಮೊತ್ತವನ್ನು, ಭಾರತ ರಿಸರ್ವ್ ಬ್ಯಾಂಕ್ ಅಧಿನಿಯಮ, 1934ರಲ್ಲಿ ಪರಿಭಾಷಿಸಲಾಗಿರುವಂಥ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಇಡಬಹುದು.

18. **ಹಜ್ ಸಮಿತಿಯ ಲೆಕ್ಕದ ರಿಜಿಸ್ಟರ್:–**

(1) ಅಧಿನಿಯಮ ಮತ್ತು ಈ ನಿಯಮಗಳ ಅಡಿಯಲ್ಲಿ ಹಜ್ ಸಮಿತಿಯ ರಿಜಿಸ್ಟರ್ ಜೊತೆಗೆ, ಹಜ್ ಸಮಿತಿಯ ನಿಧಿಗಳು ಮತ್ತು ಇತರ ಆದಾಯಕ್ಕೆ ಸಂಬಂಧಿಸಿದಂತೆ ಸಮಿತಿಯು ತನ್ನ ಕಚೇರಿಯಲ್ಲಿ ಈ ಕೆಳಕಂಡ ರಿಜಿಸ್ಟರ್‌ಗಳನ್ನು ಸಹ ನಿರ್ವಹಿಸತಕ್ಕದ್ದು.

(i) ವೇತನ ಬಿಲ್ಲು ರಿಜಿಸ್ಟರ್

(ii) ಖಾತಾ ಲೆಕ್ಕ

(iii) ನಗದು ಪುಸ್ತಕ

(iv) ಠೇವಣಿಗಳು ಮತ್ತು ಮುಂಗಡಗಳ ರಿಜಿಸ್ಟರ್

(v) ಕೊಡಲಾದ ನಿಧಿಗಳ ವಸೂಲಿಯನ್ನು ಪರಿಶೀಲಿಸುವ ಬೇಡಿಕೆ, ವಸೂಲಿ ಮತ್ತು ಶಿಲ್ಕು ರಿಜಿಸ್ಟರ್

(vi) ವೇತನ ಸಂದಾಯ ಪಟ್ಟಿ

(vii) ಸಾದಿಲ್ವಾರು ವೆಚ್ಚಗಳ ರಿಜಿಸ್ಟರ್

(viii) ಮುದ್ರಾಂಕಗಳು ಮತ್ತು ಮೊಹರು ರಿಜಿಸ್ಟರ್

(ix) ಭದ್ರತಾ ಪತ್ರಗಳು, ನಿಧಿ ಪತ್ರಗಳು ಹಾಗೂ ಡಿಬೆಂಚರ್ ಪತ್ರಗಳ ರಿಜಿಸ್ಟರ್

(x) ಸಿಬ್ಬಂದಿ ಲೆಕ್ಕಪರಿಶೋಧನೆ ರಿಜಿಸ್ಟರ್

(xi) ಜಮೆಗಳು, ನೀಡಿಕೆಗಳು, ಡಿಬೆಂಚರ್ ಪತ್ರಗಳನ್ನು ತೋರಿಸುವ ದಾಸ್ತಾನು ರಿಜಿಸ್ಟರ್

ಎ) ಲೇಖನ ಸಾಮಗ್ರಿ ಮತ್ತು ಮುದ್ರಿತ ನಮೂನೆಗಳು

ಬಿ) ಪೀಠೋಪಕರಣಗಳು, ಹಾಗೂ

ಸಿ) ರಾಜ್ಯ ಹಜ್ ಸಮಿತಿಯ ಕಚೇರಿಯಲ್ಲಿರುವ ವಾಹನಗಳು, ಬೆರಳಚ್ಚುಯಂತ್ರಗಳು, ಕಂಪ್ಯೂಟರ್‌ಗಳು, ಜೋಡಣೆಗಳು, ಅಳವಡಿಕೆಗಳು ಇತ್ಯಾದಿ ಸ್ಥಿರಯಂತ್ರಗಳು, ಇತರ ವಸ್ತುಗಳು ಇತ್ಯಾದಿ.

(xii) ಖಾಯಂ ಮುಂಗಡ ಲೆಕ್ಕಪತ್ರಗಳು;

(xiii) ಸಮಿತಿಯ ನೇರ ನಿರ್ವಹಣೆ ಅಡಿಯಲ್ಲಿ ಹಜ್ ಸಮಿತಿ ಸಂಸ್ಥೆಗಳ ಎಲ್ಲ ಸ್ಥಿರಾಸ್ತಿಗಳ ರಿಜಿಸ್ಟರ್;

(xiv) ಹಜ್ ಸಮಿತಿಯ ಚರಾಸ್ತಿಗಳ ರಿಜಿಸ್ಟರ್;

(xv) ಜಡ ವಸ್ತುಗಳ ರಿಜಿಸ್ಟರ್

(xvi) ಹಾಜರಿ ಪುಸ್ತಕ

(xvii) (ಎ) ಪ್ರಕರಣದ ಹಂತಗಳೊಂದಿಗೆ ಭಾರತ ಸರ್ವೋಚ್ಚನ್ಯಾಯಾಲಯದಲ್ಲಿ;

(ಬಿ) ಪ್ರಕರಣದ ಹಂತಗಳೊಂದಿಗೆ ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ;

(ಸಿ) ಪ್ರಕರಣಗಳ ಹಂತಗಳೊಂದಿಗೆ ಇತರ ಜಿಲ್ಲಾ ನ್ಯಾಯಾಲಯಗಳಲ್ಲಿ; ಮತ್ತು

(ಡಿ) ಪ್ರಕರಣಗಳ ಹಂತಗಳೊಂದಿಗೆ ರೆವಿನ್ಯೂ ನ್ಯಾಯಾಲಯಗಳಲ್ಲಿ

– ಇತ್ಯರ್ಥದಲ್ಲಿರುವ ಪ್ರಕರಣಗಳಿಗೆ ಸಂಬಂಧಿಸಿದ ನ್ಯಾಯಾಲಯ ವ್ಯಾಜ್ಯಗಳು

(xviii) ನ್ಯಾಯಾಲಯಗಳ ಮುಂದಿರುವ ಎಲ್ಲ ವ್ಯಾಜ್ಯಗಳು

**ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿ:**

ಸಮಿತಿ ವಿಷಯಗಳಿಗೆ ಸಂಬಂಧಿಸಿದ ಎಲ್ಲ ವಿವಾದಗಳು, ರಾಜ್ಯದ ರಾಜಧಾನಿಯಲ್ಲಿನ ನ್ಯಾಯಾಲಯಗಳಲ್ಲಿ ಮತ್ತು ರಾಜ್ಯದ ಕೇಂದ್ರ ಕಾರ್ಯಸ್ಥಾನಗಳಲ್ಲಿರುವ ಸಕ್ಷಮ ನ್ಯಾಯಾಲಯಗಳಲ್ಲಿ ನಡೆಯತಕ್ಕದ್ದು.

(2) ಸಮಿತಿಯ ಲೆಕ್ಕಪತ್ರಗಳನ್ನು ನಿರ್ವಹಿಸುವಲ್ಲಿ, ಹಜ್ ಸಮಿತಿಯು ಈ ಕೆಳಕಂಡ ನಿಯಮಗಳನ್ನು ಪಾಲಿಸತಕ್ಕದ್ದು, ಎಂದರೆ:–

(i) ಪ್ರತಿ ಆರ್ಥಿಕ ವರ್ಷಕ್ಕಾಗಿ ಪ್ರತ್ಯೇಕವಾಗಿ ಲೆಕ್ಕಪತ್ರಗಳನ್ನು ನಿರ್ವಹಿಸತಕ್ಕದ್ದು.

(ii) ಹಜ್ ಸಮಿತಿಯ ಕಚೇರಿಯಲ್ಲಿ ಸ್ವೀಕರಿಸಿದ(ಅಥವಾ) ಹಜ್ ಸಮಿತಿಯ ಜಮೆಗೆ ಬ್ಯಾಂಕ್‌ನಲ್ಲಿ ಸಂದಾಯವಾದ ಎಲ್ಲ ಮೊತ್ತಗಳನ್ನು ಸಮುಚಿತ ಶೀರ್ಷಿಕೆ ಅಡಿಯಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ಕರ್ನಾಟಕ ರಾಜ್ಯ ಹಜ್ ಸಮಿತಿಯ ಲೆಕ್ಕ ಗುಮಾಸ್ತನು ಅದರ ನಮೂದುಗಳನ್ನು ಮಾಡತಕ್ಕದ್ದು.

(3) ವೇತನ ಬಿಲ್ಲುಗಳು, ಪ್ರಯಾಣ ಭತ್ಯೆ ಬಿಲ್ಲುಗಳು ಹಾಗೂ ಸಾದಿಲ್ವಾರು ಬಿಲ್ಲುಗಳನ್ನು ಸಿದ್ಧಪಡಿಸುವುದಕ್ಕಾಗಿ ಮತ್ತು ನಿಯಂತ್ರಿಸುವುದಕ್ಕಾಗಿ ರಾಜ್ಯ ಲೆಕ್ಕಸಂಹಿತೆಯಲ್ಲಿ ಮತ್ತು ರಾಜ್ಯ ಖಜಾನೆ ಸಂಹಿತೆಯಲ್ಲಿರುವಂಥದೇ ರೀತಿಯ ನಮೂನೆಗಳನ್ನು ನಿರ್ವಹಿಸತಕ್ಕದ್ದು.

(4) ಹಜ್ ಸಮಿತಿಯ ಕಚೇರಿಯ ಉಪಯೋಗಕ್ಕಾಗಿ ಹಜ್ ನಿಧಿಯಿಂದ ಅಂಚೆ ಸ್ಟಾಂಪುಗಳನ್ನು ಖರೀದಿಸತಕ್ಕದ್ದು ಮತ್ತು ನೀಡತಕ್ಕದ್ದು. ಅಂಚೆ ಸ್ಟಾಂಪಿನ ವೆಚ್ಚವನ್ನು ಪ್ರತ್ಯೇಕ ಸಾದಿಲ್ವಾರು ಬಿಲ್ಲುಗಳ ಮೂಲಕ ಪಡೆದುಕೊಳ್ಳತಕ್ಕದ್ದು.

**19. ಹಜ್ ಸಮಿತಿ ಲೆಕ್ಕಪತ್ರಗಳ ಲೆಕ್ಕಪರಿಶೋಧನೆ:–**

(1) ಹಜ್ ಸಮಿತಿಯ ಲೆಕ್ಕಪತ್ರಗಳ ಲೆಕ್ಕಪರಿಶೋಧನೆಯನ್ನು ಮಾಡುವಲ್ಲಿ, ಲೆಕ್ಕಪರಿಶೋಧಕನು ನಗದನ್ನು ಪರಿಶೀಲಿಸತಕ್ಕದ್ದು ಮತ್ತು ಪರಿಶೀಲನೆಗಾಗಿ ನಗದು ಸಂಪೂರ್ಣವಾಗಿ ಸಿದ್ಧವಾಗಿರುತ್ತದೆಯೇ ಎಂಬುದನ್ನು ವರದಿಯಲ್ಲಿ ನಮೂದಿಸತಕ್ಕದ್ದು.

(2) ಲೆಕ್ಕಪರಿಶೋಧಕನು, ಲೆಕ್ಕಪರಿಶೋಧನೆ ಕ್ರಮದಲ್ಲಿ ಷೇರುಪತ್ರಗಳು, ಸರ್ಕಾರಿ ಬಂಧಪತ್ರಗಳು ಮತ್ತು ಇತರ ಭದ್ರತಾ ಪತ್ರಗಳು, ಬ್ಯಾಂಕ್ ಪಾಸ್ ಪುಸ್ತಕಗಳು ಹಾಗೂ ವರದಿ ಇವುಗಳು ಸರಿಯಾಗಿರುವುದಾಗಿ ಕಂಡುಬಂದಿದೆಯೇ ಎಂಬುದನ್ನು ಪರಿಶೀಲಿಸತಕ್ಕದ್ದು.

(3) ಲೆಕ್ಕಪರಿಶೋಧಕನು, ಲೆಕ್ಕಪರಿಶೋಧನೆಯಲ್ಲಿ ಉದ್ಭವಿಸುವ ಇತರ ಅಂಶಗಳ ಮಿತಿಯಲ್ಲಿ ಈ ಕೆಳಕಂಡಂತೆ ವರದಿ ಮಾಡತಕ್ಕದ್ದು:–

i) ನಿರ್ವಹಿಸಬೇಕಾದ ಲೆಕ್ಕಪತ್ರಗಳು ಮತ್ತು ರಿಜಿಸ್ಟರ್‌ಗಳನ್ನು ಸರಿಯಾಗಿ ನಿರ್ವಹಿಸಲಾಗುತ್ತಿದೆಯೇ;

ii) ಸಮಿತಿಗೆ ಬರಬೇಕಾದ ವಂತಿಗೆಗಳು ಮತ್ತು ಇತರ ಜಮೆಗಳನ್ನು ಸರಿಯಾದ ಸಮಯದಲ್ಲಿ ವಸೂಲಿ ಮಾಡಲಾಗಿದೆಯೇ ಹಾಗೂ ಮೊತ್ತಗಳು ಮತ್ತು ಇತರ ಬಾಕಿಗಳನ್ನು ವಸೂಲಿ ಮಾಡಲು ಕ್ರಮಗಳನ್ನು ಕೈಗೊಳ್ಳಲಾಗಿದೆಯೇ, ಹಾಗೆ ಮಾಡಲಾಗಿಲ್ಲದಿದ್ದರೆ, ಯಾವ ಪ್ರಕರಣಗಳಲ್ಲಿ ಅಂಥ ಕ್ರಮವನ್ನು ಕೈಗೊಳ್ಳಲಾಗಿರುವುದಿಲ್ಲ;

iii) ವಸೂಲಿಗಳನ್ನು ಸರಿಯಾಗಿ ಲೆಕ್ಕಕ್ಕೆ ತೆಗೆದುಕೊಳ್ಳಲಾಗಿದೆಯೇ

iv) ಯಾವುದೇ ವಂತಿಗೆಯನ್ನು ಕಳುಹಿಸಲಾಗಿದೆಯೇ ಅಥವಾ ಕಡಿಮೆ ಮಾಡಲಾಗಿದೆಯೇ, ಹಾಗೆ ಮಾಡಲಾಗಿದ್ದರೆ ಅದನ್ನು ಈ ನಿಯಮಗಳ ಅಡಿಯಲ್ಲಿ ಅಗತ್ಯಪಡಿಸಲಾದಂತೆ ಯುಕ್ತ ಪ್ರಾಧಿಕಾರದ ಅಡಿಯಲ್ಲಿ ಮಾಡಲಾಗಿದೆಯೇ:

v) ವಹಿಸಲಾದ ವೆಚ್ಚಗಳನ್ನು ಮಂಜೂರು ಮಾಡಲಾದ ಬಜೆಟ್ ಅನುಸಾರವಾಗಿ ವಹಿಸಲಾಗಿದೆಯೇ, ಹಾಗೂ ಅಂಥ ಬಜೆಟ್‌ನಿಂದ ಯಾವುದೇ ಮಾರ್ಗಾಂತರಗಳು/ ಮಾರ್ಗಪಲ್ಲಟಗಳನ್ನು ಮಾಡಲಾಗಿದ್ದರೆ, ಅದರ ಕಾರಣಗಳೊಂದಿಗೆ ಯಾವ ಮಾರ್ಗಾಂತರಗಳಾಗಿವೆ.

vi) ವೆಚ್ಚದ ಪ್ರತಿ ಬಾಬುಗಳನ್ನು ಸಕ್ಷಮ ಪ್ರಾಧಿಕಾರಿಯಿಂದ ಮಂಜೂರು ಮಾಡಲಾಗಿದ್ದು ಅದು ಯುಕ್ತ ವೋಚರ್‌ಗಳೊಂದಿಗೆ ಆಧಾರಿತವಾಗಿದೆಯೇ;

vii) ಲೆಕ್ಕಪರಿಶೋಧಕನ ಅಭಿಪ್ರಾಯದಲ್ಲಿ ವೆಚ್ಚದ ಯಾವುದೇ ಬಾಬು ದುಂದುವೆಚ್ಚವಾಗಿದೆಯೇ; ಹಾಗೂ

viii) ತಕ್ಷಣದ ವೆಚ್ಚಕ್ಕಾಗಿ ಅಗತ್ಯವಿಲ್ಲದ ಎಲ್ಲ ಹಣವನ್ನು ಬ್ಯಾಂಕ್‌ಗಳಲ್ಲಿ ಇಡಲಾಗಿದೆಯೇ ಹಾಗೂ ಹೆಚ್ಚುವರಿ ನಿಧಿಗಳನ್ನು ಸರಿಯಾಗಿ ಹೂಡಿಕೆ ಮಾಡಲಾಗಿದೆಯೇ

(4) ಲೆಕ್ಕಪರಿಶೋಧಕನು, ಹಜ್ ಸಮಿತಿಗೆ ಬರಬೇಕಾದ ವಂತಿಗೆಗಳ ವಸೂಲಿಯಲ್ಲಿನ ವೆಚ್ಚದಲ್ಲಿ ಅಥವಾ ಲೆಕ್ಕಪತ್ರಗಳಲ್ಲಿ ಆತನು ಗಮನಿಸಬಹುದಾಗಿರುವ ದುರುಪಯೋಗ, ಅನೌಚಿತ್ಯ ಅಥವಾ ಅಕ್ರಮವನ್ನು ಹಾಗೂ ಅಂಥ ನಷ್ಟ ಅಥವಾ ಅಪವ್ಯಯಕ್ಕೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಜವಾಬ್ದಾರರಾದ ವ್ಯಕ್ತಿಗಳ ಹೆಸರುಗಳೊಂದಿಗೆ ಹಣದ ಅಥವಾ ಅಪವ್ಯಯದ ಎಲ್ಲ ಪ್ರಕರಣಗಳನ್ನು ಸಹ ವರದಿ ಮಾಡತಕ್ಕದ್ದು;

(5) ಲೆಕ್ಕಪರಿಶೋಧಕನು ತನ್ನ ವರದಿಗೆ:–

i) ಬಜೆಟ್ ಶೀರ್ಷಿಕೆಗಳ ಅಡಿಯಲ್ಲಿನ ಜಮೆಗಳು ಮತ್ತು ಖರ್ಚುಗಳ ವಿವರಪತ್ರ;

ii) ಆದಾಯ ಮತ್ತು ವೆಚ್ಚದ ವಿವರಪತ್ರ

iii) ಆಸ್ತಿಗಳು ಮತ್ತು ಹೊಣೆಗಳ ಕ್ರೋಢೀಕೃತ ವಿವರಪತ್ರ;

iv) ಡಿಬೆಂಚರ್ ಪತ್ರಗಳು, ಷೇರು ಪತ್ರಗಳು, ಸರ್ಕಾರದ ಬಂಧಪತ್ರಗಳು ಹಾಗೂ ಇತರ ಭದ್ರತಾಪತ್ರಗಳ ವಿವರಪತ್ರ; ಹಾಗೂ

v) ನಗದಾಗಿರಲಿ ಅಥವಾ ವಸ್ತು ರೂಪದಲ್ಲಾಗಲಿ ವಂತಿಗೆಗಳು ಮತ್ತು ಪ್ರಸಕ್ತ ಬರಬೇಕಾಗಿರುವ ಹಣವು ಸೇರಿದಂತೆ ಎಲ್ಲ ರಾಜಸ್ವ ಬಾಬುಗಳ ಬೇಡಿಕೆ ಮತ್ತು ವಸೂಲಿ ಮತ್ತು ಶಿಲ್ಕು ಇವುಗಳ ಕ್ರೋಢೀಕೃತ ವಿವರಪತ್ರವನ್ನು

– ಲಗತ್ತಿಸತಕ್ಕದ್ದು.

(6) ಲೆಕ್ಕಪರಿಶೋಧಕನು ಪರಿಶೋಧಿತ ಲೆಕ್ಕಪತ್ರಗಳ (ಜಮೆ, ವೆಚ್ಚಗಳು ಮತ್ತು ಶಿಲ್ಕು ಪಟ್ಟಿ) ಒಂದು ಸಂಗ್ರಹವನ್ನು ಸಿದ್ಧಪಡಿಸತಕ್ಕದ್ದು ಹಾಗೂ ಲೆಕ್ಕಪರಿಶೋಧನೆ ವರದಿಯೊಂದಿಗೆ ಅದರ ಎರಡು ಪ್ರತಿಗಳನ್ನು ಸಲ್ಲಿಸತಕ್ಕದ್ದು.

(7) ರಾಜ್ಯ ಹಜ್ ಸಮಿತಿಯ ವಾರ್ಷಿಕ ಆರ್ಥಿಕ ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ ವರದಿಯನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(8) ರಾಜ್ಯ ಹಜ್ ಸಮಿತಿಯ ಲೆಕ್ಕಪತ್ರಗಳನ್ನು ರಾಜ್ಯ ಲೆಕ್ಕಪತ್ರಗಳ ಇಲಾಖೆಯು ಪ್ರತಿವರ್ಷ ಪರಿಶೋಧನೆ ಮಾಡತಕ್ಕದ್ದು.

(9) ಲೆಕ್ಕಪರಿಶೋಧನೆ ಟಿಪ್ಪಣಿ ಮತ್ತು ಅದರ ಉತ್ತರಗಳ ಪ್ರತಿಯನ್ನು ಅದರ ಪರಿಶೀಲನೆಗಾಗಿ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**20. ವಾರ್ಷಿಕ ವರದಿ:**

ರಾಜ್ಯ ಹಜ್ ಸಮಿತಿಯು, ಹಿಂದಿನ ವರ್ಷದ ಅವಧಿಯಲ್ಲಿನ ಅದರ ಕಾರ್ಯಚಟುವಟಿಕೆಗಳ ಸಂಪೂರ್ಣ ಲೆಕ್ಕವನ್ನು ನೀಡುವ ಮೂಲಕ ಆರ್ಥಿಕ ವರ್ಷದ ಮುಕ್ತಾಯದಿಂದ ಮೂರು ತಿಂಗಳುಗಳೊಳಗೆ ಒಂದು ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

ರಾಜ್ಯ ಸರ್ಕಾರವು, ರಾಜ್ಯ ಹಜ್ ಸಮಿತಿಯ ವಾರ್ಷಿಕ ವರದಿಯನ್ನು, ಅದನ್ನು ಸ್ವೀಕರಿಸಿದ ಕೂಡಲೇ ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಬ್ಬಾಸ್ ಷರೀಫ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ.

ಪಿ.ಆರ್.771

**HOME SECRETARIAT**

**NOTIFICATION**

**No.HD:80:POP:2011, Bangalore, Dated:04.06.2011**

In exercise of the powers conferred by clause(s) of section 2 of the Code of Criminal Procedure, 1973 (Central Act 2 of 1974), and in partial modification of the earlier notification in this behalf, the Government of Karnataka, hereby declare that with effect from the date of publication of this notification in the Official Gazette, the areas and places specified in column (3) of the schedule below, shall cease to be within the jurisdiction of the police station specified in column (4) thereof and the said areas and places shall be included within the jurisdiction of the police stations specified in column (2).

**SCHEDULE**

| Name of the District/ Police Sub-division/ Police Circle/ Police Station | Name of the Police Station in which the areas and places specified in column (3) shall be included | Name of the areas and places | Name of the Police Station from the jurisdiction of which the area and places specified in column (3) shall be excluded |
|---|---|---|---|
| 1 | 2 | 3 | 4 |
| Bellary District<br>Bellary Rural<br>Sub-Division, Bellary Rural Circle | Bellary Rural Police Station | 1) Belagalu<br>2)Belagalu thanda<br>3) Janakunte<br>4) Janakunte thanda<br>5) Haragina doni | Kuduthini Police Station |
| Bellary District<br>Bellary City Sub-Division<br>Brucepet | APMC Yard Police Station | 1) Karkala Tota<br>2) Handralu<br>3) Gonala | Bellary Rural Police Station |

By Order and in the name of the Governor of Karnataka,

**G.R. SRINIVASA RAO**

Under Secretary to Government (I/c),

Home Department (Police Expenditure)

PR-590

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 61 ಬೆಂರೂಪ್ರಾ 2011, ಬೆಂಗಳೂರು, ದಿನಾಂಕ:10.06.2011**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 4(ಸಿ) ಮತ್ತು ಉಪ ಪ್ರಕರಣ 3(I) ಮತ್ತು (IV) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈಗಿನ ಸದಸ್ಯರಾದ ಶ್ರೀ ಕೆ. ಹನುಮಪ್ಪ ಬಿನ್ ಮೇಣಸಪ್ಪ ಕೆಂಪಸಂದ್ರ ಗ್ರಾಮ, ಹಳೇಪಾಳ್ಯ ಅಂಚೆ, ಟೇಕರ್

ಹೋಬಳಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ ಇವರ ಬದಲಾಗಿ ಈ ಕೆಳಕಂಡವರನ್ನು ಮಾಲೂರು ಸ್ಥಳೀಯ ನಗರ ಯೋಜನಾ ಪ್ರಾಧಿಕಾರದ ಸದಸ್ಯರನ್ನಾಗಿ ಸರ್ಕಾರದ ಇಚ್ಛಾನುಸಾರ ಅಥವಾ ಮೂರು ವರ್ಷಗಳ ಅವಧಿವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1. | ಶ್ರೀ ಹೆಚ್.ಕೆ. ಚಂದ್ರಪ್ಪ ಬಿನ್ ಲೇಟ್ ಅಂಜನಪ್ಪ, ಭಾವನಹಳ್ಳಿ ಗ್ರಾಮ ಕಸಬಾ ಹೋಬಳಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ, | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಪಿ.ಆರ್.601 ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಾಇ 51 ಎಲ್‌ಡಬ್ಲ್ಯೂಎ 2011, ಬೆಂಗಳೂರು, ದಿನಾಂಕ:08.06.2011

ಕೈಗಾರಿಕಾ ವಿವಾದಗಳ ಅಧಿನಿಯಮ 1947ರ (ಕೇಂದ್ರಾಧಿನಿಯಮ 1947ರ ಸಂಖ್ಯೆ:14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ "ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ" ಯನ್ನು ಅಧಿಸೂಚನೆ ಸಂಖ್ಯೆ: ಕಾಇ 129 ಎಲ್‌ಡಬ್ಲ್ಯೂಎ 2010, ದಿನಾಂಕ:18.11.2010ರಲ್ಲಿ ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಅವಧಿಯನ್ನು ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ಪರಿಗಣಿಸಿದೆ. ಆದುದರಿಂದ, ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ:14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ "ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ" ಯನ್ನು ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಮುಂದಿನ 6 ತಿಂಗಳ ಅವಧಿಯವರೆಗೆ ವಿಸ್ತರಿಸಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**

ಪಿ.ಆರ್.602 ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಂಇ 12 ಮುನೋಮು 2011, ಬೆಂಗಳೂರು, ದಿನಾಂಕ:09.06.2011

ದಿ ಗದಗ್ ಕೋ–ಆಪರೇಟಿವ್ ಇಂಡಸ್ಟ್ರಿಯಲ್ ಎಸ್ಟೇಟ್ ಲಿಮಿಟೆಡ್, ಗದಗ್, ಇದರ ಒಂದು ಸಾವಿರ ವಿದ್ಯುತ್ ಮಗ್ಗಗಳ ಸಂಕೀರ್ಣವನ್ನು ಕಾರ್ಯನಿರತಗೊಳಿಸಲು ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇದಕ್ಕೆ ವಹಿಸಿಕೊಡಲು ನೋಂದಣಿಗೆ ತಗಲುವ ಮುದ್ರಾಂಕ ಶುಲ್ಕದಲ್ಲಿ ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಕಲಂ 9(1) ರನ್ವಯ ಶೇ.50 ರಷ್ಟು ರಿಯಾಯಿತಿಯನ್ನು ಹಾಗೂ ನೋಂದಣಿ ಕಾಯ್ದೆ 1908ರ ಕಲಂ 78ರ ಮೇರೆಗೆ ನೋಂದಣಿ ಶುಲ್ಕದಲ್ಲಿ ಪೂರ್ಣ ವಿನಾಯಿತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆಇ 373 ವೆಚ್ಚ–7/2011 ದಿನಾಂಕ:29.04.2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಪಿ.ಆರ್.604 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಇಂಧನ ಸಚಿವಾಲಯ

## ತಿದ್ದುಪಡಿ

### ಸಂಖ್ಯೆ: ಇಎನ್ 72 ಸಮನ್ವಯ 2011, ಬೆಂಗಳೂರು, ದಿನಾಂಕ:02.06.2011

ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಎನ್ 72 ಸಮನ್ವಯ 2011 ದಿನಾಂಕ:01.06.2011ರ ಪ್ಯಾರಾ 3ರಲ್ಲಿನ, 4 ರಿಂದ 6ನೇ ಸಾಲಿನಲ್ಲಿರುವ "ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇದರ ಮೆಮೊರಾಂಡಂ ಆಫ್ ಅಸೋಸಿಯೇಷನ್ ಅಂಡ್ ಆರ್ಟಿಕಲ್ಸ್ ಆಫ್

ಅಸೋಸಿಯೇಷನ್ 30(1) (ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ" ಎಂಬುದನ್ನು ತೆಗೆದುಹಾಕಲಾಗಿದ್ದು ಇದನ್ನು ಬಿಟ್ಟು ಉಳಿದ ಸಾಲುಗಳನ್ನು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.605

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 60 ಎಲ್ಎಸ್ಐ 2011, ಬೆಂಗಳೂರು, ದಿನಾಂಕ:10.06.2011**

ಕಾರ್ಮಿಕ ರಾಜ್ಯ ವಿಮಾ ಕಾಯ್ದೆಯ (ಕೇಂದ್ರ ಕಾಯ್ದೆ 1948ರ 34) ಸೆಕ್ಷನ್ 87ರ ಜೊತೆ ಓದಲಾದ 91ಎ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ 02 ಬೀಡಿ ಸಂಸ್ಥೆಗಳಿಗೆ ಕಾರಾವಿ ಕಾಯ್ದೆ ವ್ಯಾಪ್ತಿಯಿಂದ ಕರ್ನಾಟಕ ಸರ್ಕಾರವು ವಿನಾಯ್ತಿ ನೀಡಿದೆ.

| ಕ್ರ ಸಂ. | ಸಂಸ್ಥೆಯ ಹೆಸರು | ಅವಧಿ |
|---|---|---|
| 1. | ಮೆ: ಆನಂದ ಟೊಬ್ಯಾಕೊ ಪ್ರಾಡಕ್ಟ್ಸ್ ಕೊಡಿಯಾಲ್ ಬೈಲ್, ಮಂಗಳೂರು. | 01.01.2010 ರಿಂದ 31.12.2010ರವರೆಗೆ |
| 2. | ಮೆ: ಪ್ರಕಾಶ್ ಬೀಡೀಸ್ ಲಿ., ಕೊಡಿಯಾಲ್ ಬೈಲ್, ಮಂಗಳೂರು. | 01.01.2010 ರಿಂದ 31.12.2010ರವರೆಗೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

**LABOUR SECRETARIAT**

**NOTIFICATION**

**No.LD 60 LSI 2011, Bangalore, Dated:10.06.2011**

In exercise of the power confirmed conferred by section 87 read with 91A of the ESI Act (Central Act-34 of 1948) the Government of Karnataka hereby exempts to the following 02 Beedi Companies.

| Sl. No. | Name of the Employers | Period |
|---|---|---|
| 1. | Ananda Tobacco Products, Mangalore | 01.01.2010 to 31.12.2010 |
| 2. | Prakash Beedies Ltd., Mangalore | 01.01.2010 to31.12.2010 |

By Order and in the name of the Governor of Karnataka,

**GOVINDASWAMY**

PR-615

Desk Officer,

Labour Department (ESIS (M) Services)

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 60 ಎಲ್ಎಸ್ಐ 2011, ಬೆಂಗಳೂರು, ದಿನಾಂಕ:10.06.2011**

ಕಾರ್ಮಿಕ ರಾಜ್ಯ ವಿಮಾ ಕಾಯ್ದೆಯ (ಕೇಂದ್ರ ಕಾಯ್ದೆ 1948ರ 34) ಸೆಕ್ಷನ್ 87ರ ಜೊತೆ ಓದಲಾದ 91ಎ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ 05 ಬೀಡಿ ಸಂಸ್ಥೆಗಳಿಗೆ ಕಾರಾವಿ ಕಾಯ್ದೆ ವ್ಯಾಪ್ತಿಯಿಂದ ಕರ್ನಾಟಕ ಸರ್ಕಾರವು ವಿನಾಯ್ತಿ ನೀಡಿದೆ.

| ಕ್ರ ಸಂ. | ಸಂಸ್ಥೆಯ ಹೆಸರು | ಅವಧಿ |
|---|---|---|
| 1. | ಮೆ: ದೀಪಕ್ ಎಂಟರ್ ಪ್ರೈಸಸ್, ಮಂಗಳೂರು. | 01.06.2010 ರಿಂದ 31.12.2010ರವರೆಗೆ |
| 2. | ಮೆ: ಗುರುಕೃಪಾ ಬೀಡಿ ಇಂಡಸ್ಟ್ರೀಸ್ ಪ್ರೈ.ಲಿ., ಬಂಟವಾಳ | 01.06.2010 ರಿಂದ 31.12.2010ರವರೆಗೆ |

| ಕ್ರ. ಸಂ. | ಸಂಸ್ಥೆಯ ಹೆಸರು | ಅವಧಿ |
|---|---|---|
| 3. | ಮೆ: ಜ್ಯೋತಿ ಹೋಮ್ ಇಂಡಸ್ಟ್ರೀಸ್ ಪ್ರೈ.ಲಿ., ಮೈಸೂರು | 01.06.2010 ರಿಂದ 31.12.2010ರವರೆಗೆ |
| 4. | ಮೆ: ಮಂಗಳೂರು ಗಣೇಶ ಬೀಡಿ ವರ್ಕ್ಸ್, ಮೈಸೂರು | 01.06.2010 ರಿಂದ 31.12.2010ರವರೆಗೆ |
| 5. | ಮೆ: ಸೌತ್ ಕೆನರಾ ಹೋಮ್ ಇಂಡಸ್ಟ್ರೀಸ್, ಮಂಗಳೂರು. | 01.06.2010 ರಿಂದ 31.12.2010ರವರೆಗೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

**LABOUR SECRETARIAT**

**NOTIFICATION**

**No.LD 60 LSI 2011, Bangalore, Dated:10.06.2011**

In exercise of the power confirmed by section 87 read with 91A of the ESI Act (Central Act-34 of 1948) the Government of Karnataka hereby exempts to the following 05 Beedi Companies.

| Sl. No. | Name of the Employers | Period |
|---|---|---|
| 1. | Deepak Enterprises, Mangalore | 01.06.2010 to 31.12.2010 |
| 2. | Gurukripa Beedi Industry Pvt. Ltd., Bantwala. | 01.06.2010 to31.12.2010 |
| 3. | Jyothi Home Industries Pvt. Ltd., Mysore. | 01.06.2010 to31.12.2010 |
| 4. | Mangalore Ganesh Beedi Works, Mysore. | 01.06.2010 to31.12.2010 |
| 5. | South Kanara Home Industries, Mangalore. | 01.06.2010 to31.12.2010 |

By Order and in the name of the Governor of Karnataka,

**GOVINDASWAMY**

PR-616

Desk Officer,

Labour Department (ESIS (M) Services)

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 60 ಎಲ್ಎಸ್ಐ 2011, ಬೆಂಗಳೂರು, ದಿನಾಂಕ:10.06.2011**

ಕಾರ್ಮಿಕ ರಾಜ್ಯ ವಿಮಾ ಕಾಯ್ದೆಯ (ಕೇಂದ್ರ ಕಾಯ್ದೆ 1948ರ 34) ಸೆಕ್ಷನ್ 87ರ ಜೊತೆ ಓದಲಾದ 91ಎ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಬೀಡಿ ಸಂಸ್ಥೆಗಳಿಗೆ ಕಾರಾವಿ ಕಾಯ್ದೆ ವ್ಯಾಪ್ತಿಯಿಂದ ಕರ್ನಾಟಕ ಸರ್ಕಾರವು ವಿನಾಯ್ತಿ ನೀಡಿದೆ.

| ಕ್ರ. ಸಂ. | ಸಂಸ್ಥೆಯ ಹೆಸರು | ಅವಧಿ |
|---|---|---|
| 1. | ಮೆ: ಆನಂದ ಟೊಬ್ಯಾಕೊ ಪ್ರಾಡಕ್ಟ್ಸ್ ಕೊಡಿಯಾಲ್ ಬೈಲ್, ಮಂಗಳೂರು. | 01.01.2011 ರಿಂದ 31.12.2011 ರವರೆಗೆ |
| 2. | ಮೆ: ಭಾರತ್ ಬೀಡಿ ವರ್ಕ್ಸ್ ಪ್ರೈ.ಲಿ., ಕದ್ರಿ ರಸ್ತೆ, ಮಂಗಳೂರು. | 01.01.2011 ರಿಂದ 31.12.2011 ರವರೆಗೆ |
| 3. | ಮೆ: ಸೀಜಯ್ ಟೊಬ್ಯಾಕೊ ಲಿ., ಉಲ್ಲಾಳ, ಮಂಗಳೂರು | 01.01.2011 ರಿಂದ 31.12.2011 ರವರೆಗೆ |
| 4. | ಮೆ: ದೀಪಕ್ ಎಂಟರ್ ಪ್ರೈಸಸ್, ಮಂಗಳೂರು | 01.01.2011 ರಿಂದ 31.12.2011 ರವರೆಗೆ |
| 5. | ಮೆ: ದೇಸಾಯಿ ಬ್ರದರ್ಸ್ ಲಿ., ಬಿಜೈ, ಮಂಗಳೂರು. | 01.01.2011 ರಿಂದ 31.12.2011 ರವರೆಗೆ |
| 6. | ಮೆ: ಗುರುಕೃಪಾ ಬೀಡಿ ಇಂಡಸ್ಟ್ರೀಸ್ ಪ್ರೈ.ಲಿ., ಬಂಟವಾಳ | 01.01.2011 ರಿಂದ 31.12.2011 ರವರೆಗೆ |
| 7. | ಮೆ: ಜೆ.ಪಿ. ಟೊಬ್ಯಾಕೊ ಪ್ರಾಡಕ್ಟ್ಸ್ ಪ್ರೈ.ಲಿ., ಪುತ್ತೂರು, ದ.ಕ. | 01.01.2011 ರಿಂದ 31.12.2011 ರವರೆಗೆ |
| 8. | ಮೆ: ಜ್ಯೋತಿ ಹೋಮ್ ಇಂಡಸ್ಟ್ರೀಸ್ ಪ್ರೈ.ಲಿ., ಮೈಸೂರು | 01.01.2011 ರಿಂದ 31.12.2011 ರವರೆಗೆ |

| ಕ್ರ ಸಂ. | ಸಂಸ್ಥೆಯ ಹೆಸರು | ಅವಧಿ |
|---|---|---|
| 9. | ಮೆ: ಮಂಗಳೂರು ಗಣೇಶ ಬೀಡಿ ವರ್ಕ್ಸ್, ಮೈಸೂರು | 01.01.2011 ರಿಂದ 31.12.2011 ರವರೆಗೆ |
| 10. | ಮೆ: ಪ್ರಭುದಾಸ್ ಕಿಶೋರ್‌ದಾಸ್ ಟೊಬ್ಯಾಕೊ ಪ್ರಾಡಕ್ಟ್ಸ್ ಪ್ರೈ.ಲಿ., ಕುಲಶೇಖರ, ಮಂಗಳೂರು. | 01.01.2011 ರಿಂದ 31.12.2011 ರವರೆಗೆ |
| 11. | ಮೆ: ಪಿ & ಜೆ ಟೊಬ್ಯಾಕೊ ಪ್ರಾಡಕ್ಟ್ಸ್ ಕಂ., ಬೆಳ್ತಂಗಡಿ, ದಕ್ಷಿಣ ಕನ್ನಡ. | 01.01.2011 ರಿಂದ 31.12.2011 ರವರೆಗೆ |
| 12. | ಮೆ: ಪ್ರಕಾಶ್ ಬೀಡೀಸ್ ಲಿ., ಕೊಡಿಯಾಲ್ ಬೈಲ್, ಮಂಗಳೂರು. | 01.01.2011 ರಿಂದ 31.12.2011 ರವರೆಗೆ |
| 13. | ಮೆ: ಪಿ.ವಿ.ಎಸ್. ಬೀಡೀಸ್ ಪ್ರೈ. ಲಿ., ಕೊಡಿಯಾಲ್ ಬೈಲ್, ಮಂಗಳೂರು | 01.01.2011 ರಿಂದ 31.12.2011 ರವರೆಗೆ |
| 14. | ಮೆ: ಸೌತ್ ಕೆನರಾ ಹೋಮ್ ಇಂಡಸ್ಟ್ರೀಸ್, ಮಂಗಳೂರು. | 01.01.2011 ರಿಂದ 31.12.2011 ರವರೆಗೆ |
| 15. | ಮೆ: ಸದರನ್ ಇಂಡಿಯಾ ಬೀಡಿ ವರ್ಕ್ಸ್ ಪ್ರೈ. ಲಿ., ಪುತ್ತೂರು, ದ.ಕ. | 01.01.2011 ರಿಂದ 31.12.2011 ರವರೆಗೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

**LABOUR SECRETARIAT**

**NOTIFICATION**

**No.LD 60 LSI 2011, Bangalore, Dated:10.06.2011**

In exercise of the power confirmed by section 87 read with 91A of the ESI Act (Central Act-34 of 1948) the Government of Karnataka hereby exempts to the following Beedi Companies.

| Sl. No. | Name of the Employers | Period |
|---|---|---|
| 1. | Ananda Tobacco Products, Mangalore | 01.01.2011 to 31.12.2011 |
| 2. | Bharathi Beedi Works Pvt. Ltd., Mangalore | 01.01.2011 to 31.12.2011 |
| 3. | Cee Jay Tobacco Ltd., Mangalore | 01.01.2011 to 31.12.2011 |
| 4. | Deepak Enterprises, Mangalore | 01.01.2011 to 31.12.2011 |
| 5. | Desai Brothers Ltd., Mangalore | 01.01.2011 to 31.12.2011 |
| 6. | Gurukripa Beedi Industry Pvt. Ltd., Bantwala. | 01.01.2011 to 31.12.2011 |
| 7. | J.P. Tobacco Products Pvt. Ltd., Uppinangady. | 01.01.2011 to 31.12.2011 |
| 8. | Jyothi Home Industries Pvt. Ltd., Mysore.. | 01.01.2011 to 31.12.2011 |
| 9. | Mangalore Ganesh Beedi Works, Mysore. | 01.01.2011 to 31.12.2011 |
| 10. | Prabhu Das Kishor Das Tobacco Products Pvt. Ltd., | 01.01.2011 to 31.12.2011 |
| 11. | P & J Tobacco Products Co., Mangalore. | 01.01.2011 to 31.12.2011 |
| 12. | Prakash Beedies Ltd., Mangalore | 01.01.2011 to 31.12.2011 |
| 13. | PVS Beedies Pvt. Ltd., Mangalore. | 01.01.2011 to 31.12.2011 |
| 14. | South Kanara Home Industries, Mangalore. | 01.01.2011 to 31.12.2011 |
| 15. | Southern India Bidi Works Pvt. Ltd., Puttur. | 01.01.2011 to 31.12.2011 |

By Order and in the name of the Governor of Karnataka,

**GOVINDASWAMY**

PR-617

Desk Officer,

Labour Department (ESIS (M) Services)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ
## ಅಧಿಸೂಚನೆ

**ಸಂಖ್ಯೆ: ಅಪಜೀ 85 ಎಫ್‌ಎಎಫ್ 2008, ಬೆಂಗಳೂರು, ದಿನಾಂಕ: 20–05–2011**

ಕರ್ನಾಟಕ ಅರಣ್ಯ ಕಾಯ್ದೆ 1963 ರ (1964ನೇ ಇಸವಿಯ ಕಾಯ್ದೆ 5) ಕಲಂ–4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಚಿಕ್ಕಮಗಳೂರು ಜಿಲ್ಲೆ, ಕೊಪ್ಪ ತಾಲ್ಲೂಕು, ಹರಿಹರಪುರ ಹೋಬಳಿ, ಹೊಸೂರು, ಬಂಡಿಗಡಿ, ಹಾಲಮತ್ತೂರು ಗ್ರಾಮಗಳ ಜಮೀನುಗಳನ್ನು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಮೀಸಲು ಅರಣ್ಯವೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಿಲ್ಲೆ | ಚಿಕ್ಕಮಗಳೂರು |
| ಕಂದಾಯ ಉಪ ವಿಭಾಗ | ಚಿಕ್ಕಮಗಳೂರು |
| ತಾಲ್ಲೂಕು | ಕೊಪ್ಪ |
| ಹೋಬಳಿ | ಹರಿಹರಪುರ |
| ಗ್ರಾಮ | ಹೊಸೂರು, ಬಂಡಿಗಡಿ ಭಾಗ, ಹಾಲಮತ್ತೂರು ಭಾಗ. |
| ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದ ಹೆಸರು | ಹೊಸೂರು ಬ್ಲಾಕ್–I ರಿಂದ VII |

2. ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದ ಬ್ಲಾಕ್, ಗ್ರಾಮ, ಸರ್ವೆ ನಂಬರ್, ವಿಸ್ತೀರ್ಣದ ವಿವರ.

| ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದಲ್ಲಿರುವ ಬ್ಲಾಕ್‌ಗಳ ಹೆಸರು | ಗ್ರಾಮ | ಸರ್ವೆ ನಂಬರ್ | ಉದ್ದೇಶಿತ **"ಮೀಸಲು ಅರಣ್ಯ"** ಅಧಿಸೂಚನೆಗೆ ಒಳಪಡುವ ಪ್ರದೇಶದ ವಿಸ್ತೀರ್ಣ ಎಕರೆ–ಗುಂಟೆ. |
|---|---|---|---|
| ಹೊಸುರು ಬ್ಲಾಕ್–I | ಹೊಸೂರು | 135 | 95–00 |
| | | 118 | 15–00 |
| | | 114 | 2–35 |
| | ಭಂಡಿಗಡಿ | 314 | 36–37 |
| | | | **149–32** |
| ಹೊಸೂರು ಬ್ಲಾಕ್–II | ಹೊಸೂರು | 60 | 60–00 |
| | | 190 | 49–05 |
| | ಹಾಲಮತ್ತೂರು | 273 | 43–28 |
| | | | **152–33** |
| ಹೊಸೂರು ಬ್ಲಾಕ್–III | ಹೊಸೂರು | 190 | 25–06 |
| | | 189 | 70–08 |
| | | 169 | 56–00 |
| | | 21 | 84–35 |
| | | 114 | 41–32 |
| | | 115 | 5–00 |
| | | | **283–01** |
| ಹೊಸೂರು ಬ್ಲಾಕ್–IV | ಹೊಸೂರು | 189 | 53–27 |
| | | | **53–27** |
| ಹೊಸೂರು ಬ್ಲಾಕ್–V | ಹೊಸೂರು | 114 | 69–32 |
| | | 63 | 8–05 |
| | | | **77–37** |
| ಹೊಸೂರು ಬ್ಲಾಕ್–VI | ಹೊಸೂರು | 190 | 9–34 |
| | | 21 | 38–18 |
| | | | **48–12** |

| ಉದ್ದೇಶಿತ "ಮೀಸಲು ಅರಣ್ಯ" ಪ್ರದೇಶದಲ್ಲಿರುವ ಬ್ಲಾಕ್‌ಗಳ ಹೆಸರು | ಗ್ರಾಮ | ಸರ್ವೆ ನಂಬರ್ | ಉದ್ದೇಶಿತ "ಮೀಸಲು ಅರಣ್ಯ" ಅಧಿಸೂಚನೆಗೆ ಒಳಪಡುವ ಪ್ರದೇಶದ ವಿಸ್ತೀರ್ಣ ಎಕರೆ–ಗುಂಟೆ. |
|---|---|---|---|
| ಹೊಸೂರು ಬ್ಲಾಕ್–VII | ಹೊಸೂರು | 138 | 33–00 |
| | | 135 | 57–00 |
| | | | **90–00** |
| **ಏಳು ಬ್ಲಾಕ್‌ಗಳ ಒಟ್ಟು ವಿಸ್ತೀರ್ಣ** | | | **855–22** |

1) ಮೇಲ್ಕಂಡ ಕಾಯ್ದೆಯ ಕಲಂ 4(1)(ಸಿ) ಪ್ರಕಾರ ಸರ್ಕಾರವು ಉಪ ವಿಭಾಗಾಧಿಕಾರಿ, ಚಿಕ್ಕಮಗಳೂರು ಉಪ ವಿಭಾಗ, ಚಿಕ್ಕಮಗಳೂರು ಇವರನ್ನು ಅರಣ್ಯ ವ್ಯವಸ್ಥಾಪನಾಧಿಕಾರಿಗಳನ್ನಾಗಿ ನೇಮಿಸಲಾಗಿದೆ. ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಮೇಲೆ ನಮೂದಿಸಿರುವ ಪ್ರದೇಶದ ಮೇಲೆ ಯಾವುದೇ ವ್ಯಕ್ತಿಗೆ ಇರಬಹುದಾಗಿರುವ ಹಕ್ಕು ಬಾಧ್ಯತೆಗಳನ್ನು ಇತ್ಯರ್ಥಗೊಳಿಸಿ, ನಿರ್ಧರಿಸಿ ವಿಚಾರಣೆ ಮಾಡಿ ತೀರ್ಮಾನಿಸುವುದು.

2) ಮೇಲ್ಕಂಡ ಕಾಯ್ದೆಯ ಕಲಂ 4(2) ಪ್ರಕಾರ ಸರ್ಕಾರವು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೊಪ್ಪ ವಿಭಾಗ, ಕೊಪ್ಪ ಇವರನ್ನು ಈ ವಿಚಾರಣೆಯಲ್ಲಿ ಅರಣ್ಯ ವ್ಯವಸ್ಥಾಪನಾಧಿಕಾರಿಗಳಿಗೆ ಸಹಕರಿಸಲು ಹಾಗೂ ಅರಣ್ಯ ಇಲಾಖೆಯನ್ನು ಪ್ರತಿನಿಧಿಸಲು ನೇಮಿಸಿದೆ.

3) ಮೇಲ್ಕಂಡ ಕಾಯ್ದೆಯ ಕಲಂ 11, 12 ಮತ್ತು 14ನೇ ಪ್ರಕರಣಗಳ ಪ್ರಕಾರ ಅರಣ್ಯ ವ್ಯವಸ್ಥಾಪನಾಧಿಕಾರಿಗಳು, ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 3 ತಿಂಗಳೊಳಗೆ ಬಾಧಿತ ವ್ಯಕ್ತಿಗಳು ಸಲ್ಲಿಸಿದ ಮೇಲ್ಮನವಿಗಳನ್ನು ಪರಿಶೀಲಿಸಲು ಸದರಿ ಅಧಿನಿಯಮ ಕಲಂ 16(1)ನೇ ಪ್ರಕಾರ ಕರ್ನಾಟಕ ಕಂದಾಯ ಮೇಲ್ಮನವಿ ನ್ಯಾಯ ಮಂಡಳಿಗೆ ಅಧಿಕಾರವಿರುತ್ತದೆ.

4) ಮೇಲ್ಕಂಡ ಅಧಿನಿಯಮ 15ನೇ ಪ್ರಕರಣದ ಪ್ರಕಾರ ಬಾಧಿತವಾದ ಯಾವುದೇ ವ್ಯಕ್ತಿಯು ಸದರಿ ಅಧಿನಿಯಮದ ಕಲಂ 16(2)ನೇ ಪ್ರಕಾರ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳೊಳಗೆ ಜಿಲ್ಲಾ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು.

5) **ಇತರೆ ಸವಲತ್ತುಗಳು:** ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದಲ್ಲಿ ಸ್ಥಳೀಯ ನಿವಾಸಿಗಳಿಗೆ ಎಳೆಯ ನೆಡುತೋಪು ಪ್ರದೇಶಗಳನ್ನು ಹೊರತುಪಡಿಸಿ ಉಳಿದ ಪ್ರದೇಶಗಳಲ್ಲಿ ತಮ್ಮ ಜಾನುವಾರು ಗಳಿಗೆ ಉಚಿತವಾಗಿ ಹುಲ್ಲು ಮೇಯಿಸಲು ಹಾಗೂ ತಮ್ಮ ಸ್ವಂತ ಉಪಯೋಗಕ್ಕಾಗಿ ಉಚಿತವಾಗಿ ಒಣ ಎಲೆ ಮತ್ತು ಒಣ ಸೌದೆಯನ್ನು ಸಂಗ್ರಹಿಸಲು ಅವಕಾಶವಿರುತ್ತದೆ.

6) ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದ ಪ್ರತಿ ಬ್ಲಾಕ್‌ಗೆ ಸಂಬಂಧಿಸಿದ ಸಂಕ್ಷಿಪ್ತ ಸರಹದ್ದು ವಿವರಣೆ ಮತ್ತು ಸವಿವರವಾದ ಸರಹದ್ದು ವಿವರಗಳನ್ನು ಮುಂದೆ ವಿವರಿಸಿದೆ.

**ಹೊಸೂರು ಬ್ಲಾಕ್–I**

**ಸಂಕ್ಷಿಪ್ತ ಸರಹದ್ದು ವಿವರಣೆ**

ಉತ್ತರ – ಹೊಸೂರು ಗ್ರಾಮದ ಸರ್ವೆ ನಂ.118 ರ ಮತ್ತು ಸರ್ವೆ ನಂ.114 ರ ಉಳಿಕೆ ಪ್ರದೇಶ ಮತ್ತು ಭಂಡಿಗಡಿ ಗ್ರಾಮದ ಸರ್ವೆ ನಂ.314 ರ ಉಳಿಕೆ ಪ್ರದೇಶ.

ಪೂರ್ವ – ಭಂಡಿಗಡಿ ಗ್ರಾಮದ ಸರ್ವೆ ನಂ.314 ರ ಉಳಿಕೆ ಪ್ರದೇಶ, ಭಂಡಿಗಡಿ ಸರ್ವೆ ನಂ. 268 ರ ಉತ್ತರ ಮತ್ತು ಪಶ್ಚಿಮ ಗಡಿ, ಹೊಸೂರು ಸರ್ವೆ ನಂ.135/1 ರ ಉತ್ತರ, ಪಶ್ಚಿಮ, ದಕ್ಷಿಣದ ಗಡಿ ಹೊಸೂರು ಸರ್ವೆ ನಂ.135 ಮತ್ತು ಭಂಡಿಗಡಿ ಸರ್ವೆ ನಂ.264 ರ ಸಾಮಾನ್ಯ ಗಡಿ, ಹೊಸೂರು ಸರ್ವೆ ನಂ.134 ರ ಉತ್ತರ, ಪಶ್ಚಿಮ ಗಡಿ.

ದಕ್ಷಿಣ – ನಿಲುವಾಗಿಲು ಗ್ರಾಮದ ಗಡಿ.

ಪಶ್ಚಿಮ – ಹೆಗ್ಗಾರು ಗ್ರಾಮದ ಗಡಿ ಮತ್ತು ಹೊಸೂರು ಗ್ರಾಮದ ಸರ್ವೆ ನಂ.135 ರ ಉಳಿಕೆ ಪ್ರದೇಶ, ಭಂಡಿಗಡಿ ಸರ್ವೆ ನಂ.314 ರ ಉಳಿಕೆ ಪ್ರದೇಶ, ಹೊಸೂರು ಗ್ರಾಮದ ಸರ್ವೆ ನಂ.114, 135, 118ರ ಉಳಿಕೆ ಪ್ರದೇಶ.

**ಸವಿವರವಾದ ಸರಹದ್ದು ವಿವರಣೆ**

**ಉತ್ತರ:** ಸೀಮಾರೇಖೆಯು ಹೊಸೂರು ಗ್ರಾಮದ ಸರ್ವೆ ನಂ.115, 117, 118 ಮತ್ತು 114 ರ ಕೂಡುಬಾಂದಿನಿಂದ ಸರ್ವೆ ನಂ.117 ರ ಪೂರ್ವಗಡಿಯಲ್ಲಿನ ಮೂರನೇ ಬಾಂದುಕಲ್ಲಿನಲ್ಲಿ ಸ್ಥಾನ ಸಂಖ್ಯೆ 1 ರಿಂದ ಪ್ರಾರಂಭವಾಗಿ ಹೊಸೂರು ಸರ್ವೆ ನಂ.118, 114 ಹಾಗೂ ಭಂಡಿಗಡಿ ಗ್ರಾಮ ಸರ್ವೆ ನಂ.314 ರಲ್ಲಿ ವಿವಿಧ ಕೋನಗಳಲ್ಲಿ **27–60** ಸರಪಳಿ ದೂರ ಚಲಿಸಿ ಭಂಡಿಗಡಿ ಗ್ರಾಮದ ಸರ್ವೆ ನಂ.314 ರಲ್ಲಿರುವ ಮುನಿಯೂರು ಪರಮೇಶ್ವರಿ ದೇವಸ್ಥಾನಕ್ಕೆ ಹೋಗುವ ಬಂಡಿದಾರಿಯ ಬಲಬದಿಯಲ್ಲಿ ಸ್ಥಾನ ಸಂಖ್ಯೆ 3 ನ್ನು ಸೇರಿ ನಂತರ ಸದರಿ ಬಂಡಿದಾರಿಯ ಬಲಬದಿಯಲ್ಲಿ **14–10** ಸರಪಳಿ ದೂರ ಚಲಿಸಿ ಭಂಡಿಗಡಿ ಸರ್ವೆ ನಂ.305 ರ ದಕ್ಷಿಣಾಗ್ರ ಮೂಲೆಯಿಂದ $234^0$ ಕೋನ 3–10 ಸರಪಳಿ ದೂರದಲ್ಲಿ ಸ್ಥಾನಸಂಖ್ಯೆ 4 ನ್ನು ಸೇರುತ್ತದೆ.

**ಉತ್ತರದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ**

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿ ಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 1 | 2 | $086^0$ | 18–70 |
| 2 | 3 | $037^0$ | 8–90 |
| | | | **27–60** |
| 3 | 3ಎ | $070^0$ | 7–10 |
| 3ಎ | 4 | $112^0$ | 7–00 |
| | | | **14–10** |

**ಪೂರ್ವ:** ಸೀಮಾರೇಖೆಯು ಸ್ಥಾನ ಸಂಖ್ಯೆ 4 ರಿಂದ ಮುಂದುವರೆದು ಭಂಡಿಗಡಿ ಗ್ರಾಮದ ಸರ್ವೆ ನಂ.314 ರಲ್ಲಿ ವಿವಿಧ ಕೋನಗಳಲ್ಲಿ **30–80** ಸರಪಳಿ ದೂರ ಚಲಿಸಿ ಭಂಡಿಗಡಿ ಸರ್ವೆ ನಂ.284, 285ರ ದಕ್ಷಿಣದ ಕೂಡುಬಾಂದಿನಲ್ಲಿ ಸ್ಥಾನ ಸಂಖ್ಯೆ 8ನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಸರ್ವೆ ನಂ.314 ರಲ್ಲಿ ವಿವಿಧ ಕೋನಗಳಲ್ಲಿ **15–15** ಸರಪಳಿ ದೂರ ಚಲಿಸಿ ಭಂಡಿಗಡಿ ಗ್ರಾಮದ ಸರ್ವೆ ನಂ.268 ರ ಈಶಾನ್ಯ ಬಾಂದಿನಲ್ಲಿ ಸ್ಥಾನ ಸಂಖ್ಯೆ 10 ನ್ನು ಸೇರುತ್ತದೆ. ಮುಂದುವರೆದು ಸೀಮಾ ರೇಖೆಯು ಭಂಡಿಗಡಿ ಗ್ರಾಮದ ಸರ್ವೆ ನಂ.268 ರ ಉತ್ತರ ಮತ್ತು ಪಶ್ಚಿಮ ಗಡಿಯಲ್ಲಿ **21–75** ಸರಪಳಿ ದೂರ ಚಲಿಸಿ ಸರ್ವೆ ನಂ.265 ವಾಯುವ್ಯ ಬಾಂದಿನಲ್ಲಿ ಸ್ಥಾನ ಸಂಖ್ಯೆ 10ಎ ಯನ್ನು ಸೇರಿ ನಂತರ ಸದರಿ ಸರ್ವೆ ನಂ.265, 264 ರ ಪಶ್ಚಿಮದ ಗಡಿಯಲ್ಲಿ **3–00** ಸರಪಳಿ ದೂರ ಚಲಿಸಿ ಭಂಡಿಗಡಿ ಗ್ರಾಮದ ಸರ್ವೆ ನಂ.264, 314 ಹಾಗೂ ಹೊಸೂರು ಗ್ರಾಮದ ಸರ್ವೆ ನಂ.135, 135/1 ಕೂಡುಬಾಂದಿನಲ್ಲಿ ಸ್ಥಾನ ಸಂಖ್ಯೆ 10ಬಿ ಯನ್ನು ಸೇರಿ, ನಂತರ ಸರ್ವೆ ನಂ.135/1 ರ ಉತ್ತರ ಪಶ್ಚಿಮ, ದಕ್ಷಿಣದ ಗಡಿಯಲ್ಲಿ **12–00** ಸರಪಳಿ ದೂರ ಚಲಿಸಿ ಸ್ಥಾನ ಸಂಖ್ಯೆ 10ಸಿ ಯನ್ನು ಸರ್ವೆ ನಂ.135/1 ರ ಆಗ್ನೇಯ ಬಾಂದಿನಲ್ಲಿ ಸೇರುತ್ತದೆ. ಅಲ್ಲಿಂದ ಸೀಮಾರೇಖೆಯು ಭಂಡಿಗಡಿ ಸರ್ವೆ ನಂ.264 ಹಾಗೂ ಹೊಸೂರು ಸರ್ವೆ ನಂ.135 ರ ಸಾಮಾನ್ಯ ಗಡಿಯಲ್ಲಿ ಸುಮಾರು **9–90** ಸರಪಳಿ ದೂರ ಚಲಿಸಿ, ಭಂಡಿಗಡಿ ಸರ್ವೆ ನಂ.263, 264 ಹೊಸೂರು ಸರ್ವೆ ನಂ.135, 134 ರ ಕೂಡುಬಾಂದಿನಲ್ಲಿ ಸ್ಥಾನ ಸಂಖ್ಯೆ 10ಡಿ ಯನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಹೊಸೂರು ಸರ್ವೆ ನಂ.134 ರ ಉತ್ತರ ಮತ್ತು ಪಶ್ಚಿಮ ಗಡಿಯಲ್ಲಿ ಸುಮಾರು **15–00** ಸರಪಳಿ ದೂರ ಚಲಿಸಿ ಸರ್ವೆ ನಂ.134 ರ ನೈರುತ್ಯ ಬಾಂದುವಿನಲ್ಲಿ ಹೊಸೂರು ಮತ್ತು ನಿಲುವಾಗಿಲು ಗ್ರಾಮಗಳ ಸಾಮಾನ್ಯ ಗಡಿಯಲ್ಲಿ ಸ್ಥಾನ ಸಂಖ್ಯೆ 11 ನ್ನು ಸೇರುತ್ತದೆ.

**ಪೂರ್ವದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ**

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 4 | 5 | **$226^0$** | 16–50 |
| 5 | 6 | $181^0$ | 4–05 |
| 6 | 7 | $124^0$ | 4–00 |
| 7 | 8 | $065^0$ | 6–25 |
| | | | **30–80** |
| 8 | 9 | $097^0$ | 5–40 |
| 9 | 10 | $130^0$ | 9–75 |
| | | | **15–15** |
| 10 | 10ಎ | ಭಂಡಿಗಡಿ ಸರ್ವೆ ನಂ.268 ರ ಉತ್ತರ ಮತ್ತು ಪಶ್ಚಿಮ ಗಡಿ | 21–75 |
| | | | **21–75** |

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 10ಎ | 10ಬಿ | ಭಂಡಿಗಡಿ ಸರ್ವೆ ನಂ.265 ಮತ್ತು 264 ರ ಪಶ್ಚಿಮ ಗಡಿ | 3–00 |
| | | | **3–00** |
| 10ಬಿ | 10ಸಿ | ಹೊಸೂರು ಸರ್ವೆ ನಂ.135/1ರ ಉತ್ತರ, ಪಶ್ಚಿಮ, ದಕ್ಷಿಣ ಗಡಿ | 12–00 |
| | | | **12–00** |
| 10ಸಿ | 10ಡಿ | ಭಂಡಿಗಡಿ ಸರ್ವೆ ನಂ.264 ಮತ್ತು ಹೊಸೂರು ಸರ್ವೆ ನಂ.135 ರ ಸಾಮಾನ್ಯ ಗಡಿ | 9–90 |
| | | | **9–90** |
| 10ಡಿ | 11 | ಹೊಸೂರು ಸರ್ವೆ ನಂ.134 ರ ಉತ್ತರ ಮತ್ತು ಪಶ್ಚಿಮ ಗಡಿ | 15–00 |
| | | | **15–00** |

**ದಕ್ಷಿಣ:** ಸೀಮಾರೇಖೆಯು ಸ್ಥಾನ ಸಂಖ್ಯೆ 11 ರಿಂದ ಮುಂದುವರೆದು, ಹೊಸೂರು ಮತ್ತು ನಿಲುವಾಗಿಲು ಗ್ರಾಮಗಳ ಸಾಮಾನ್ಯ ಗಡಿಯಲ್ಲಿ ಸುಮಾರು **72–00** ಸರಪಳಿ ದೂರ ಚಲಿಸಿ, ಹೊಸೂರು, ಹೆಗ್ಗಾರು ಮತ್ತು ನಿಲುವಾಗಿಲು ಗ್ರಾಮಗಳು ಕೂಡುವ ಮುಕ್ಕುಪ್ಪೆ ಬಾಂದಿನಲ್ಲಿ ಸ್ಥಾನ ಸಂಖ್ಯೆ 11ಎ ಯನ್ನು ಸೇರುತ್ತದೆ.

**ದಕ್ಷಿಣದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ**

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 11 | 11ಎ | ಹೊಸೂರು– ನಿಲುವಾಗಿಲು ಗ್ರಾಮಗಳ ಸಾಮಾನ್ನ ಗಡಿ | 72–00 |
| | | | **72–00** |

**ಪಶ್ಚಿಮ:** ಸೀಮಾರೇಖೆಯು ಸ್ಥಾನ ಸಂಖ್ಯೆ 11ಎ ಯಿಂದ ಮುಂದುವರೆದು ಹೆಗ್ಗಾರು ಮತ್ತು ಹೊಸೂರು ಗ್ರಾಮಗಳ ಸಾಮಾನ್ಯ ಗಡಿಯಲ್ಲಿ ಉತ್ತರಾಭಿಮುಖವಾಗಿ **10–20** ಸರಪಳಿ ಚಲಿಸಿ ಸದರಿ ಗಡಿಯಲ್ಲಿಯೇ ಸ್ಥಾನ ಸಂಖ್ಯೆ 12 ನ್ನು ಸೇರುತ್ತದೆ. ಮುಂದುವರೆದು ಹೊಸೂರು ಗ್ರಾಮದ ಸರ್ವೆ ನಂ.135 ರಲ್ಲಿ ವಿವಿಧ ಕೋನಗಳಲ್ಲಿ **29–50** ಸರಪಳಿ ದೂರ ಚಲಿಸಿ ಸರ್ವೆ ನಂ.137 ಮತ್ತು 136 ರ ದಕ್ಷಿಣದ ಕೂಡುಬಾಂದಿನಿಂದ $079^0$ ಕೋನ 8–05 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 15 ನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಸರ್ವೆ ನಂ.136 ರ ದಕ್ಷಿಣ ಗಡಿಯಿಂದ ಒಂದು ಸರಪಳಿ ಸಮಾನಾಂತರದಲ್ಲಿ 9–35 ಸರಪಳಿ ದೂರ ಚಲಿಸಿ, ಸ್ಥಾನ ಸಂಖ್ಯೆ 15ಎ ಯನ್ನು ಸೇರುತ್ತದೆ. ಮುಂದುವರೆದು ಹೊಸೂರು ಸರ್ವೆ ನಂ.135 ರಲ್ಲಿ ವಿವಿಧ ಕೋನಗಳಲ್ಲಿ **20–65** ಸರಪಳಿ ದೂರ ಚಲಿಸಿ ಸರ್ವೆ ನಂ.225 ರ ಪಶ್ಚಿಮಾಗ್ರ ಮೂಲೆಯಲ್ಲಿ ಸ್ಥಾನ ಸಂಖ್ಯೆ 19 ನ್ನು ಸೇರುತ್ತದೆ. ಮುಂದು ವರೆದು ಸರ್ವೆ ನಂ.225 ರ ದಕ್ಷಿಣ ಮತ್ತು 135 ರ ಸಾಮಾನ್ಯ ಗಡಿಯಲ್ಲಿ ಸುಮಾರು **22–00** ಸರಪಳಿ ದೂರ ಚಲಿಸಿ ಸರ್ವೆ ನಂ.225 ಆಗ್ನೇಯ ಬಾಂದಿನಲ್ಲಿ ಸ್ಥಾನ ಸಂಖ್ಯೆ 20 ನ್ನು ಸೇರಿ ನಂತರ ಸರ್ವೆ ನಂ.135 ರಲ್ಲಿ ಉತ್ತರಾಭಿಮುಖವಾಗಿ **14–80** ಸರಪಳಿ ದೂರ ಚಲಿಸಿ ಸರ್ವೆ ನಂ.130 ಮತ್ತು 131 ರ ದಕ್ಷಿಣ ದಿಕ್ಕಿನ ಕೂಡುಬಾಂದಿನಿಂದ $156^0$ ಕೋನ 1–95 ಸರಪಳಿ ದೂರದಲ್ಲಿ ಗಾಡಿ ರಸ್ತೆಯ ಬಲಭಾಗದಲ್ಲಿ ಸ್ಥಾನ ಸಂಖ್ಯೆ 21 ನ್ನು ಸೇರುತ್ತದೆ. ಮುಂದುವರೆದು ಗಾಡಿ ರಸ್ತೆಯ ಬಲಬದಿಯ ಲ್ಲಿಯೇ ಚಲಿಸಿ ಸರ್ವೆ ನಂ.133 ಕ್ಕೆ ಹೊಂದಿಕೊಂಡಿರುವ ಕೆರೆಯ ಪಶ್ಚಿಮ, ದಕ್ಷಿಣ, ಪೂರ್ವದ ಗಡಿಯಲ್ಲಿ ಚಲಿಸಿ ಪುನ: ಗಾಡಿ ರಸ್ತೆಯ ಬಲಬದಿಯಲ್ಲಿ 19–15 ಸರಪಳಿ ದೂರ ಚಲಿಸಿ ಸರ್ವೆ ನಂ.135, 131, 133 ಕೂಡುಬಾಂದಿನಿಂದ $158^0$ ಕೋನ 5–50 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 22ನ್ನು ರಸ್ತೆಯ ಬಲಬದಿಯಲ್ಲಿ ಸೇರುತ್ತದೆ. ಮುಂದುವರೆದು ಹೊಸೂರು ಸರ್ವೆ

ನಂ.135 ಹಾಗೂ ಭಂಡಿಗಡಿ ಗ್ರಾಮದ ಸರ್ವೆ ನಂ.314 ಮತ್ತು ಹೊಸೂರು ಸರ್ವೆ ನಂ.135 ರಲ್ಲಿ ವಿವಿಧ ಕೋನಗಳಲ್ಲಿ **40–85** ಸರಪಳಿ ದೂರ ಚಲಿಸಿ ಹೊಸೂರು ಸರ್ವೆ ನಂ.191 ರ ಈಶಾನ್ಯ ಮೂಲೆಬಾಂದಿನಲ್ಲಿ ಸ್ಥಾನ ಸಂಖ್ಯೆ 30 ನ್ನು ಸೇರುತ್ತದೆ. ಮುಂದುವರೆದು ಹೊಸೂರು ಸರ್ವೆ ನಂ.135ರಲ್ಲಿ ವಿವಿಧ ಕೋನಗಳಲ್ಲಿ 10–55 ಸರಪಳಿ ದೂರ ಚಲಿಸಿ ಸರ್ವೆ ನಂ.191 ಹಾಗೂ 132 ರ ಪಶ್ಚಿಮದ ಕೂಡುಬಾಂದಿನಿಂದ $246^0$ ಕೋನ 1–05 ಸರಪಳಿ ದೂರದಲ್ಲಿರುವ ಸ್ಥಾನ ಸಂಖ್ಯೆ 32 ನ್ನು ಸೇರುತ್ತದೆ. ಮುಂದುವರೆದು ಹೊಸೂರು ಸರ್ವೆ ನಂ.191, 132, 131 ರ ಪಶ್ಚಿಮ ಗಡಿಯಲ್ಲಿ 1–00 ಸರಪಳಿ ಸಮಾನಾಂತರದಲ್ಲಿ ಮತ್ತು ಸರ್ವೆ ನಂ.131, 130, 124, 123 ರ ಉತ್ತರ ಗಡಿಯಲ್ಲಿ 1–00 ಸರಪಳಿ ಸಮಾನಾಂತರದಲ್ಲಿ **31–60** ಸರಪಳಿ ದೂರ ಚಲಿಸಿ ಸರ್ವೆ ನಂ.120, 121 ರ ಪೂರ್ವದ ಕೂಡುಬಾಂದಿನಿಂದ $139^0$ ಕೋನ 3–85 ಸರಪಳಿ ದೂರದಲ್ಲಿರುವ ಸ್ಥಾನ ಸಂಖ್ಯೆ 33 ನ್ನು ಸೇರುತ್ತದೆ. ಮುಂದುವರೆದು ಸರ್ವೆ ನಂ.135 ಮತ್ತು 118 ರಲ್ಲಿ ವಿವಿಧ ಕೋನಗಳಲ್ಲಿ **25–20** ಸರಪಳಿ ದೂರ ಚಲಿಸಿ ಸರ್ವೆ ನಂ.117 ಪೂರ್ವದ ಗಡಿಯಲ್ಲಿ 5ನೇ ಬಾಂದಿನಲ್ಲಿ ಸ್ಥಾನ ಸಂಖ್ಯೆ 36 ನ್ನು ಸೇರಿ ನಂತರ ಸರ್ವೆ 117 ರ ಪೂರ್ವದ ಗಡಿಯಲ್ಲಿಯೇ 5–10 ಸರಪಳಿ ದೂರ ಚಲಿಸಿ ಸ್ಥಾನ ಸಂಖ್ಯೆ 37 ರ ಮುಖಾಂತರ ಪ್ರಾರಂಭಿಕ ಸ್ಥಾನ ಸಂಖ್ಯೆ 1 ನ್ನು ಸೇರುತ್ತದೆ.

**ಪಶ್ಚಿಮದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ**

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 11ಎ | 12 | ಹೆಗ್ಗಾರು ಮತ್ತು ಹೊಸೂರು ಗ್ರಾಮಗಳ ಸಾಮಾನ್ಯ ಗಡಿ | 10–20 |
| | | | **10–20** |
| 12 | 13 | $085^0$ | 11–25 |
| 13 | 14 | $084^0$ | 5–85 |
| 14 | 15 | $048^0$ | 12–40 |
| | | | **29–50** |
| 15 | 15ಎ | ಸರ್ವೆ ನಂ.136 ರ ದಕ್ಷಿಣ ಗಡಿಯಿಂದ ಒಂದು ಸರಪಳಿ ಸಮಾನಾಂತರದಲ್ಲಿ | 9–35 |
| | | | **9–35** |
| 15ಎ | 16 | $070^0$ | 6–25 |
| 16 | 17 | $285^0$ | 4–90 |
| 17 | 18 | $357^0$ | 7–05 |
| 18 | 19 | $030^0$ | 2–45 |
| | | | **20–65** |
| 19 | 20 | ಸರ್ವೆ ನಂ.225 ರ ದಕ್ಷಿಣ ಮತ್ತು ಸರ್ವೆ ನಂ.135 ರ ಸಾಮಾನ್ಯ ಗಡಿ | 22–00 |
| | | | **22–00** |
| 20 | 21 | $340^0$ | 14–80 |
| | | | **14–80** |
| 21 | 22 | ಗಾಡಿ ರಸ್ತೆಯ ಬಲ ಭಾಗದಲ್ಲಿ ಮತ್ತು ಸರ್ವೆ ನಂ.133 ಕ್ಕೆ ಲಗತ್ತಾಗಿರುವ ಕೆರೆಯ ಪಶ್ಚಿಮ, ದಕ್ಷಿಣ, ಪೂರ್ವದ ಗಡಿಯಲ್ಲಿ ಚಲಿಸಿ ಪುನ: ಗಾಡಿ ರಸ್ತೆಯ ಬಲಬದಿಯಲ್ಲಿ 4–50 ಸರಪಳಿ ಚಲಿಸಿ | 19–15 |
| | | | **19–15** |

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 22 | 23 | $082^0$ | 3–95 |
| 23 | 24 | $349^0$ | 4–20 |
| 24 | 25 | $308^0$ | 2–35 |
| 25 | 26 | $333^0$ | 5–40 |
| 26 | 27 | $071^0$ | 8–65 |
| 27 | 28 | $325^0$ | 2–00 |
| 28 | 29 | $282^0$ | 9–25 |
| 29 | 30 | $225^0$ | 5–05 |
| | | | **40–85** |
| 30 | 31 | $310^0$ | 6–40 |
| 31 | 32 | $204^0$ | 4–15 |
| | | | 10–55 |
| 32 | 33 | ಹೊಸೂರು ಸರ್ವೆ ನಂ.191, 132, 131 ರ ಪಶ್ಚಿಮ ಗಡಿ ಸರ್ವೆ ನಂ.131, 130, 124, 123 ರ ಉತ್ತರ ಗಡಿಯಲ್ಲಿ ಒಂದು ಸರಪಳಿ ಸಮಾನಾಂತರ ದೂರದಲ್ಲಿ | 31–60 |
| | | | **31–60** |
| 33 | 34 | $067^0$ | 4–60 |
| 34 | 35 | $356^0$ | 8–05 |
| 35 | 36 | $344^0$ | 12–55 |
| | | | **25–20** |
| 36 | 37 | $042^0$ | 3–10 |
| 37 | 01 | $033^0$ | 2–00 |
| | | | **5–10** |

**ಹೊಸೂರು ಬ್ಲಾಕ್–II**

**ಸಂಕ್ಷಿಪ್ತ ಸರಹದ್ದುಗಳ ವಿವರ**

ಉತ್ತರ – ಹಾಲಮತ್ತೂರು ಗ್ರಾಮದ ಸರ್ವೆ ನಂ.273 ರ ಉಳಿಕೆ ಪ್ರದೇಶ ಮತ್ತು ಹೊಸೂರು ಗ್ರಾಮದ ಸರ್ವೆ ನಂ.60ರ ಉಳಿಕೆ ಪ್ರದೇಶ.

ಪೂರ್ವ – ಹೊಸೂರು ಗ್ರಾಮದ ಸರ್ವೆ ನಂ.60 ಮತ್ತು 190 ರ ಉಳಿಕೆ ಪ್ರದೇಶ.

ದಕ್ಷಿಣ – ಹೊಸೂರು ಗ್ರಾಮದ ಸರ್ವೆ ನಂ.190 ರ ಉಳಿಕೆ ಪ್ರದೇಶ.

ಪಶ್ಚಿಮ – ಹೊಸೂರು ಗ್ರಾಮದ ಸರ್ವೆ ನಂ.190 ಮತ್ತು ಹಾಲಮತ್ತೂರು ಗ್ರಾಮದ ಸರ್ವೆ ನಂ.273 ರ ಉಳಿಕೆ ಪ್ರದೇಶ.

**ಸವಿವರವಾದ ಸರಹದ್ದು ವಿವರಣೆ**

**ಉತ್ತರ:** ಸೀಮಾರೇಖೆಯು ಹಾಲಮತ್ತೂರು ಗ್ರಾಮದ ದಕ್ಷಿಣದ ಕೂಡುಬಾಂದಿನಿಂದ $168^0$ ಕೋನ 1–55 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 1 ರಿಂದ ಪ್ರಾರಂಭವಾಗಿ ವಿವಿಧ ಕೋನಗಳಲ್ಲಿ ಹಾಲಮತ್ತೂರು ಗ್ರಾಮದ ಸರ್ವೆ ನಂ.273 ರಲ್ಲಿ ಮತ್ತು ಹೊಸೂರು ಗ್ರಾಮ ಸರ್ವೆ ನಂ.60 ರಲ್ಲಿ ಸುಮಾರು **68–60** ಸರಪಳಿ ದೂರ ಚಲಿಸಿ ಹಾಲಮತ್ತೂರು ಗ್ರಾಮದ ಸರ್ವೆ ನಂ. 3 ರ ಪೂರ್ವಾಗ್ರ ಮೂಲೆಯಿಂದ $139^0$ ಕೋನ 9–50 ಸರಪಳಿ ದೂರದಲ್ಲಿ ಹಳ್ಳದ ಬದಿಯಲ್ಲಿ ಸ್ಥಾನ ಸಂಖ್ಯೆ 10 ನ್ನು ಸೇರುತ್ತದೆ.

**ಉತ್ತರದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ**

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 1 | 2 | $111^0$ | 6–25 |
| 2 | 2ಎ | ಹಾಲಮತ್ತೂರು ಸರ್ವೆ ನಂ.283 ರ ಉತ್ತರ ಗಡಿ. | 4–25 |
| 2ಎ | 2ಬಿ | ಹಾಲಮತ್ತೂರು ಸರ್ವೆ ನಂ.283 ರ ಪಶ್ಚಿಮ ಗಡಿ. | 2–25 |
| 2ಬಿ | 3 | ಹಾಲಮತ್ತೂರು ಸರ್ವೆ ನಂ.283 ರ ದಕ್ಷಿಣ ಗಡಿ. | 4–10 |
| 3 | 4 | $027^0$ | 5–90 |
| 4 | 5 | $193^0$ | 11–25 |
| 5 | 6 | $175^0$ | 7–90 |
| 6 | 7 | $092^0$ | 2–90 |
| 7 | 8 | $032^0$ | 8–65 |
| 8 | 9 | $103^0$ | 3–85 |
| 9 | 10 | ಹಳ್ಳದ ಬದಿಯಲ್ಲಿ | 11–30 |
| | | | **68–60** |

**ಪೂರ್ವ:** ಸೀಮಾರೇಖೆಯು ಸ್ಥಾನ ಸಂಖ್ಯೆ 10 ರಿಂದ ಮುಂದುವರೆದು ಹೊಸೂರು ಗ್ರಾಮದ ಸರ್ವೆ ನಂ.60 ರಲ್ಲಿ ವಿವಿಧ ಕೋನಗಳಲ್ಲಿ **50–80** ಸರಪಳಿ ದೂರ ಚಲಿಸಿ ಹೊಸೂರು ಗ್ರಾಮದ ಸರ್ವೆ ನಂ.61, 56, 60 ರ ಕೂಡುಬಾಂದಿನಿಂದ $334^0$ ಕೋನ 1–10 ಸರಪಳಿ ದೂರದಲ್ಲಿರುವ ಸ್ಥಾನ ಸಂಖ್ಯೆ 18 ನ್ನು ಸೇರುತ್ತದೆ. ಮುಂದುವರೆದು ಹೊಸೂರು ಗ್ರಾಮದ ಸರ್ವೆ ನಂ.56, 59, 58 ರ ಉತ್ತರದ ಗಡಿಯಿಂದ ಒಂದು ಸರಪಳಿ ಸಮನಾಂತರದಲ್ಲಿ **15–95** ಸರಪಳಿ ಚಲಿಸಿ ಸರ್ವೆ ನಂ.60, 58 ರ ಪಶ್ಚಿಮದ ಕೂಡುಬಾಂದಿನಿಂದ ಪೂರ್ವದಲ್ಲಿರುವ ಎರಡನೇ ಬಾಂದುಕಲ್ಲಿನಿಂದ $314^0$ ಕೋನ 1–45 ಸರಪಳಿ ದೂರದಲ್ಲಿರುವ ಸ್ಥಾನ ಸಂಖ್ಯೆ 19 ನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಸರ್ವೆ ನಂ.60 ರಲ್ಲಿ ಪಶ್ಚಿಮಾಭಿಮುಖವಾಗಿ **7–70** ಸರಪಳಿ ಚಲಿಸಿ ಕೊಪ್ಪದಿಂದ ಕಮ್ಮರಡಿಗೆ ಹೋಗುವ ರಸ್ತೆಯ ಎಡಬದಿಯಲ್ಲಿ ಸ್ಥಾನ ಸಂಖ್ಯೆ 21 ನ್ನು ಸೇರಿ ನಂತರ ಸದರಿ ರಸ್ತೆಯಲ್ಲಿಯೆ **5–25** ಸರಪಳಿ ದಕ್ಷಿಣಾಭಿಮುಖವಾಗಿ ಚಲಿಸಿ ಸ್ಥಾನ ಸಂಖ್ಯೆ 22 ನ್ನು ರಸ್ತೆಯ ಎಡಬದಿಯಲ್ಲಿ ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಸರ್ವೆ ನಂ.60 ರಲ್ಲಿ ವಿವಿದ ಕೋನಗಳಲ್ಲಿ **23–20** ಸರಪಳಿ ಚಲಿಸಿ ಸರ್ವೆ ನಂ.57 ರ ನೈರುತ್ಯ ಬಾಂದಿನಿಂದ $325^0$ ಕೋನ 3–00 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 26 ನ್ನು ಸೇರುತ್ತದೆ.

**ಪೂರ್ವದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ**

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 10 | 11 | $157^0$ | 5–15 |
| 11 | 12 | $209^0$ | 8–45 |
| 12 | 13 | $148^0$ | 3–45 |
| 13 | 14 | $049^0$ | 7–35 |
| 14 | 15 | $129^0$ | 9–25 |
| 15 | 16 | $201^0$ | 1–70 |

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 16 | 17 | $270^0$ | 4–40 |
| 17 | 18 | $175^0$ | 11–05 |
| | | | **50–80** |
| 18 | 19 | ಹೊಸೂರು ಸರ್ವೆ ನಂ.56, 59, 58 ರ ಉತ್ತರದ ಗಡಿಯಿಂದ ಒಂದು ಸರಪಳಿ ಸಮಾನಾಂತರದಲ್ಲಿ | 15–95 |
| | | | **15–95** |
| 19 | 20 | $259^0$ | 3–05 |
| 20 | 21 | $265^0$ | 4–65 |
| | | | **7–70** |
| 21 | 22 | ಕೊಪ್ಪದಿಂದ ಕಮ್ಮರಡಿಗೆ ಹೋಗುವ ರಸ್ತೆಯ ಎಡಬದಿ | 5–25 |
| | | | **5–25** |
| 22 | 23 | $095^0$ | 3–90 |
| 23 | 24 | $125^0$ | 11–05 |
| 24 | 25 | $162^0$ | 3–15 |
| 25 | 26 | $208^0$ | 5–10 |
| | | | **23–20** |

**ದಕ್ಷಿಣ:** ಸೀಮಾರೇಖೆಯು ಸ್ಥಾನ ಸಂಖ್ಯೆ 26 ರಿಂದ ಮುಂದುವರೆದು ಹೊಸೂರು ಗ್ರಾಮದ ಸರ್ವೆ ನಂ.60 ರಲ್ಲಿ ವಿವಿದ ಕೋನಗಳಲ್ಲಿ **21–70** ಸರಪಳಿ ದೂರ ಚಲಿಸಿ ಸರ್ವೆ ನಂ.190 ರಲ್ಲಿ ಕೊಪ್ಪದಿಂದ ಕಮ್ಮರಡಿಗೆ ಹೋಗುವ ಮುಖ್ಯರಸ್ತೆಯ ಎಡಬದಿಯಲ್ಲಿ ಸ್ಥಾನ ಸಂಖ್ಯೆ 30 ನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಸರ್ವೆ ನಂ.190 ರಲ್ಲಿರುವ ಕೊಪ್ಪ–ಕಮ್ಮರಡಿ ರಸ್ತೆಯ ಎಡಬದಿಯಲ್ಲಿಯೇ ದಕ್ಷಿಣಾಭಿಮುಖವಾಗಿ **17–55** ಸರಪಳಿ ದೂರ ಚಲಿಸಿ ಸದರಿ ರಸ್ತೆಯ ಎಡಬದಿ ಯಲ್ಲಿಯೇ ಸ್ಥಾನ ಸಂಖ್ಯೆ 31 ನ್ನು ಸೇರಿ, ನಂತರ ನೈರುತ್ಯಾಭಿಮುಖವಾಗಿ ಸರ್ವೆ ನಂ.190 ರಲ್ಲಿ **3–35** ಸರಪಳಿ ದೂರ ಚಲಿಸಿ ಸರ್ವೆ ನಂ.196 ರ ಉತ್ತರಾಗ್ರ ಮೂಲೆ ಬಾಂದಿನಿಂದ $243^0$ ಕೋನ 4–00 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 32 ನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಹೊಸೂರು ಗ್ರಾಮದ ಸರ್ವೆ ನಂ.190 ರಲ್ಲಿ ಸರ್ವೆ ನಂ.9, 8, 6, 5, 200 ಮತ್ತು 206 ರ ಉತ್ತರದ ಗಡಿಯಿಂದ ಒಂದು ಸರಪಳಿ ಸಮಾನಾಂತರ ದಲ್ಲಿ **37–30** ಸರಪಳಿ ಚಲಿಸಿ ಸರ್ವೆ ನಂ.206 ರ ವಾಯುವ್ಯ ಬಾಂದಿನಿಂದ $051^0$ ಕೋನ 2–65 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 33 ನ್ನು ಸೇರುತ್ತದೆ.

**ದಕ್ಷಿಣದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ**

| ಸ್ಥಾನ ದಿಂದ | ಸ್ಥಾನಕ್ಕೆ | ಕೋನ (ಡಿಗ್ರಿಗಳಲ್ಲಿ) | ಅಂತರ ಸರಪಳಿಗಳಲ್ಲಿ (1 ಸರಪಳಿ= 20 ಮೀಟರ್) |
|---|---|---|---|
| 26 | 26ಎ | $297^0$ | 2–65 |
| 26ಎ | 27 | $257^0$ | 2–85 |
| 27 | 28 | $333^0$ | 2–80 |
| 28 | 29 | $050^0$ | 4–05 |
| 29 | 29ಎ | $331^0$ | 1–10 |
| 29ಎ | 30 | $302^0$ | 8–25 |
| | | | **21–70** |

